# ೧. ಜಪಾನ್ ಬೆಳಕು

ಅಂಗಡಿಗಾರನು ದಯಾಳು ಮನುಷ್ಯ. ದೈವಭಕ್ತಿಯೂ ಕಡಿಮೆಯಿಲ್ಲ. ಮುಂಜಾನೆಯೆದ್ದು, ಮಳೆಗಾಲವೆನ್ನದೆ ತುಳಸಿಕಟ್ಟೆಗೆ ಅದರ ನಿತ್ಯಪಡಿಯ ನೀರೆರೆದು, ಅಂಗಡಿಗೆ ಹೋಗಿ ರಾತ್ರಿ ತನಕ ವ್ಯಾಪಾರಮಾಡಿ, ಮೂರು ಸೂಡಿ ವೀಳ್ಯದೆಲೆಯನ್ನು ಎಂದಿನಂತೆ ಮುಗಿಸಿ, ವೀಳ್ಯದೆಲೆಗೆ ಯುದ್ಧಕಾಲದಲ್ಲಿ ಬೆಲೆಯೇರಿಸಿದ ಕಾರಣವನ್ನು ತಿಳಿಯಲಾರದೆ ತನ್ನ ವಿಶ್ವಾಸದ ಗಿರಾಕಿಗಳೊಡನೆ "ವೀಳ್ಯದೆಲೆ ವ್ಯಾಪಾರದಲ್ಲಿ ಲಾಭ ನೋಡಿದಿರಾ! ಯುದ್ಧದ ಹೆಸರಲ್ಲಿ ಹಣಮಾಡಿದವರು ಈ ವೀಳ್ಯದೆಲೆಯವರೆ!" ಎನ್ನುತ್ತಾನೆ.

ಅವನ ಅಂಗಡಿ 'ಕಟ್ಲೇರಿ'ಯದು. ಜಪಾನು, ಪಿಂಗಾಣಿ ಕೈಗಾರಿಕೆ ಆರಂಭಿಸಿದಾಗ, ಆಮದುಮಾಡಿದ ಸರಕು ಅವನಲ್ಲಿ ಈಗಲೂ ಇದೆ. ಆದರೆ, ವ್ಯಾಪಾರೀ ಧರ್ಮದ ನಂಬ್ರ ೧ನೇ ಶ್ಲೋಕಕ್ಕನುಸಾರವಾಗಿ "ಕುಲದೇವರ ಆಣೆ; ಮೊನ್ನೆ ಬಂದ ಪಾರ್ಸೆಲು!" ಎನ್ನುತ್ತಾನೆ. ಪಿಂಗಾಣಿ ಸಾಮಾನು ಕೊಳೆಯುವುದಿಲ್ಲ; ತುಕ್ಕುಹಿಡಿಯುವುದೂ ಇಲ್ಲ. ನಾನವನನ್ನು ದಾಕ್ಷಿಣ್ಯಕ್ಕಾಗಿ ನಂಬುತ್ತೇನೆ.

ದಯಾಳುವಿನ ಅಂಗಡಿಯಲ್ಲಿ ಪೆಪ್ಪರ್ಮಿಂಟ್ ಮಿಠಾಯಿ ಇದೆ; ಜೊನ್ನಿ ಸಾಹೇಬರ ಪೆನ್ಸಿಲೂ ಇದೆ; ತುಫಾನಿಗೆ ಆರಿಹೋಗದ ಲಾಟಾನೂ, (ತುಫಾನು ಇಲ್ಲದಿದ್ದಾಗ ಆರಿಹೋಗುತ್ತದೆ!) ಮಡಿವಾಳನಲ್ಲೂ ಮಡಿಯಲಾರದ ಗುಂಡಿಗಳೂ, ನಾನಾ ಸೊಂಟಗಳಿಗೊಪ್ಪುವ ಚರ್ಮದ ಪಟ್ಟಿಗಳೂ, ಮಳೆಗಾಲದಲ್ಲಿ ಮಾತ್ರ ಮಾರಾಟವಾಗುವ ರಬ್ಬರ್ ಬೂಟುಗಳೂ, ಯಾವ ಗೋಡೆಗೂ ತೂಗಹಾಕಲು ಬರುವ ದೀಪಗಳೂ ಇವೆ. ಎಲ್ಲಕ್ಕಿಂತ ನಾನು ಆ ದೀಪಗಳ ಕಡೆಗೆ ಹೆಚ್ಚು ಒಲಿದಿದ್ದೇನೆ. ಅವುಗಳ ರಚನೆ, ಅವು ಕೊಡುವ ಪ್ರಕಾಶ—ಇದನ್ನು ನೋಡಿ ಮೆಚ್ಚಿದುದಲ್ಲ, ಆ ದೀಪಗಳ ಹುರುಪನ್ನು ನೋಡಿ ಮೆಚ್ಚಿದ್ದೇನೆ. ಗೋಡೆಯಿಂದ ತೆಗೆದು ನೆಲವಲ್ಲಿಟ್ಟು ಅರ್ಧನಿಮಿಷ ಆಚೆ ನೋಡಿದರೆ ಒಡೆವುವು; ಕೈಯಲ್ಲಿ ಹಿಡಿದು ಒಂದು

ಕೊಠಡಿಯಿಂದ ಮತ್ತೊಂದು ಕೊಠಡಿಗೆ ಹೋಗುವಾಗ, ಹೊಸ್ತಿಲು ದಾಟು ವಲ್ಲಿ ಪುಟಕ್ಕನೆ ನೆಗೆದು ಬಿದ್ದು ಒಡೆವುವು; ಚಿಕ್ಕ ಮಕ್ಕಳು ಅವುಗಳ ಕಡೆಗೇ ದೃಷ್ಟಿನೆಟ್ಟು ನೋಡಿದರೆ ಹಾರಿ ಒಡೆವುವು; ಒಂದು ರಾತ್ರೆ ಅವುಗಳಿಗೆ ಮುಟ್ಟದೆ, ಗೋಡೆಯಲ್ಲಿ ಇಟ್ಟಲ್ಲೆ ಇರಿಸಿಯೂ ನೋಡಿದೆ. ಮರುದಿನ ಬೆಳಿಗ್ಗೆ ಬರುವಾಗ ಕೆಳಗೆ ಬಿದ್ದು ಚೂರಾಗಿತ್ತು!

ಹಿಂದಿನ ರಾತ್ರೆಯಲ್ಲಿ ಸದ್ದಿಲ್ಲದೆ ಕೆಳಗಿಳಿದು, ನೆಲಕ್ಕೆ ತಲೆಬಡೆದು ಆತ್ಮಹತ್ಯ ಮಾಡಿಕೊಂಡಿದ್ದಿರಬೇಕೆಂದು ನೆನಸಿದೆ. ಹಾಗಾದರೆ, ನಮ್ಮ ಅಜಾಗ್ರತೆಯಿಂದ ಅವು ಒಡೆವುದಲ್ಲ!

ಜಪಾನ್ ದೀಪಗಳು, ಜಪಾನ್ ಸೈನಿಕರಂತೇ ಹುರುಪಿನಿಂದ ನೆಗೆದು ಒಡೆವುವು; ಇತರರು ಕೊಲ್ಲದಿದ್ದರೆ ತಾವೇ ಆತ್ಮಹತ್ಯಮಾಡಿಕೊಳ್ಳುವುವು. "ಹರಿಕಿರಿ"ಯು ಆ ದೀಪಗಳಿಗೂ ಒಂದು ಧರ್ಮವಾಗಿದೆ—ಎಂದು ಖಚಿತ ವಾಯಿತು.

ಮನೆಗೆ ಹೋದ ಕೂಡಲೇ ನಮ್ಮಲ್ಲಿ, ಹೆಂಡತಿ ಮಕ್ಕಳನ್ನು ನೋಡಿ "ಗುಡ್ಡೇ" ಎನ್ನುವ ಕ್ರಮವಿಲ್ಲ. ನನ್ನಲ್ಲೂ ಇಲ್ಲ. ಬದಲಾಗಿ, ಮನೆ ಯೊಳಗೆ ಕಾಲಿಟ್ಟೊಡನೆ "ದೀಪ ಒಡೆದಿದೆಯೇ?" ಎಂದು ಕೇಳುತಿದ್ದೇನೆ. "ಅಹುದು" ಎಂದು, ನಿರೀಕ್ಷಿಸಿದ ಉತ್ತರವೇ ಬರುವುದು. ಸಂತೋಷ! ಎಲ್ಲಿಯಾದರೂ ಅವರು (ಹೆಂಡತಿ-ಮಕ್ಕಳು) "ಇಲ್ಲ, ಈ ದಿನ, ಇದ್ದ ಹಾಗೇ ಇದೆ!" ಎಂದರೆ, ಲಕ್ಷದ ಸೋಡ್ತಿ ನನ್ನ ಹೆಸರಲ್ಲಿ ಬಂತೆಂದು ತಂತಿ ಬಂದಷ್ಟು ಸಂತೋಷವಾಗಿ ಎದೆಯೊಡೆದೀತೊ ಎಂದು ಸಂದೇಹ.

ಹಲವು ಬಾರಿ ಯೋಚಿಸಿದ್ದೇನೆ,—ನನ್ನ ಹೆಂಡತಿ ಮತ್ತು ಮಕ್ಕಳ ಒಂದು ಸಭೆಯನ್ನು ನನ್ನ ಚಿಕ್ಕ ಕೊಠಡಿಯಲ್ಲಿ ಕರೆದು, ಈ ಕೆಳಗಿನ ವಿಷಯು ಗಳ ಮೇಲೆ ಭಾಷಣಗಳನ್ನು ಕೊಡಬೇಕೆಂದು: (೧) ದೀಪ (ಜಪಾನ್) ಮತ್ತು ಅದರ ಉಪಯೋಗ. (೨) ಅದರ ಅತಿ ನಾಜೂಕು ರಚನೆ. (೩) ಅದರ ಪಾಲನೆ, ಪೋಷಣೆ. (೪) ದಿನಕ್ಕೊಂದು ದೀಪ ಒಡೆದರೆ ನನ್ನ ಆರ್ಥಿಕ ಮಾರ್ಕೆಟಿನಲ್ಲಾಗುವ ಗಲಭೆ. (೫) ಗೃಹ ಜೀವನದಲ್ಲಿ ಸತ್ಯದ ಆವಶ್ಯಕತೆ. (೬) ಯುದ್ಧದ ಹೆಸರಲ್ಲಿ ಅಂಗಡಿಕಾರನು ನಮಗೆ ಮಾಡುವ ಅನ್ಯಾಯವನ್ನು ತಡೆವ ಉಪಾಯಗಳು....... ಇತ್ಯಾದಿ.

ಸಾರಾಂಶವಿಷ್ಟು: ನಾವು ಈ ಜಪಾನ್ ಅನ್ಯಾಯವನ್ನು ತಡೆಯಲು ಯುದ್ಧ ಮುಖರಂಗ ರಚಿಸಬೇಕು.

ಆದರೆ, ಅವರೆಲ್ಲ (ಹೆಂಡತಿ ಮತ್ತು ಮಕ್ಕಳು) ಒಂದು ಪರಸ್ಪರ ಸಹಾಯಕ ಸಂಘವಾಗಿರುವರು. "ದೀಪ ಹೇಗೆ ಒಡೆಯಿತು?" ಎಂದು ಪ್ರಶ್ನಿಸಿದರೆ, ಒಂದೇ ಉತ್ತರ: "ತನ್ನಷ್ಟಕ್ಕೆ ತಾನೇ ಬಿದ್ದು ಒಡೆಯಿತು!"

ಪೋಲೀಸರೊಳಗಿದ್ದ ಹಾಗೆ ಅವರೊಳಗೊಂದು ಸೌಹಾರ್ದವಿದೆ; ಒಬ್ಬರಿನ್ನೊಬ್ಬರನ್ನು ಬಿಟ್ಟುಹಾಕುವುದಿಲ್ಲ.

ಸರಿ! ಅದು 'ಹರಿಕಿರಿ' ಮಾಡಿಕೊಂಡಿತು! ಸುಮಾರು ೬೯ ದೀಪಗಳೊಡೆದ ನಂತರ ಯಜಮಾನಿಯೊಡನೊಮ್ಮೆ ಕೇಳಿದೆ: "ನಾವು ದೀಪ ಉರಿಸದೆ ಇದ್ದರೇನಾಗುವುದು?"

"ಕತ್ತಲೆ" ಎಂದಳು.

ಅದೂ ನಿಜ! ಎಲ್ಲಿ ಬೆಳಕಿಲ್ಲವೋ ಅಲ್ಲಿ ಕತ್ತಲೆ. ಸಂದೇಹವಿಲ್ಲ. ಆದಕಾರಣ, ೭೦ನೇ ದೀಪಕ್ಕಾಗಿ ಅಂಗಡಿಯವನಲ್ಲಿ ಓಡಿದೆ.

ಆತ, ವೀಳ್ಯದೆಲೆಯ ಧಾರಣೆ ಏರಿದುದಕ್ಕೆ ನೊಂದು, ವೀಳ್ಯದೆಲೆಯ ಧಾರಣೆಗೊಂದು ನಿಯಂತ್ರಣ ಬೇಡವೇ ಎಂಬ ಚಿಂತೆಯಲ್ಲಿದ್ದನಾದರೂ ತನ್ನ ಗಿರಾಕಿಗಳನ್ನೂ ಚೆನ್ನಾಗಿ ಚಿಂತಿಸುವವನಾಗಿದ್ದನು. ನನ್ನನ್ನು ದೂರದಿಂದ ನೋಡಿದವನೇ ದೀಪವನ್ನು ಕೈಯಲ್ಲಿ ಹಿಡಿದು ಸಿದ್ಧವಾಗಿ ಕುಳಿತನು. ನಾನು ಅಂಗಡಿಗೆ ತಲಪುತ್ತಲೇ "ಇಕೊಳ್ಳಿ,—ಹದಿಮೂರಾಣೆ!" ಎಂದನು.

ಆಶ್ಚರ್ಯವಾಯಿತು. "ನೀನು ಭಾರೀ ಚುರುಕಿನ ವ್ಯಾಪಾರಿ ಮಾತ್ರವಲ್ಲ, ಪತ್ತೆದಾರನೂ ಅಹುದು!" ಎಂದೆ.

ನಗುತ್ತ, ವೀಳ್ಯದೆಲೆಯ ಒಂದಿಷ್ಟು ಪೀಕನ್ನು (ವೀಳ್ಯದೆಲೆಯ ಕೆಂಪು ರಸ) ತನ್ನ ತಲೆಮೇಲಿಂದ ಅದ್ಭುತಕರವಾಗಿ ದೂರದ ರಸ್ತೆಗೆ ಹಾರಿಸಿ, "ಬ್ಲೇಕ್ ಔಟ್ ಹೆಚ್ಚಾಗಿದೆ. ಈ ಕಾಲದಲ್ಲಿ ಪತ್ತೆದಾರಿ ಜ್ಞಾನ ಸ್ವಲ್ಪ ಹೆಚ್ಚು ಅವಶ್ಯವಿದೆ" ಎಂದು ಚತುರೋಕ್ತಿ ಆಡಿದನು.

"ಬ್ಲೇಕ್ ಔಟ್ ಮತ್ತು ಯುದ್ಧದಿಂದ ನಿನಗೆ ಸ್ವಲ್ಪ ಸುಖ! ಸ್ವರವೂ ಚೆನ್ನಾಗಿ ಹೊರಡುತ್ತದೆ..............ಇರಲಿ. ನಿನ್ನ ಅಂಗಡಿ ದೀಪವನ್ನೂ

ಸ್ವಲ್ಪ ದೊಡ್ಡದು ಮಾಡಲಾರಿಯೇಕೆ? ಈಗ ನೀನು ಕೊಟ್ಟ ದೀಪ ಚೆನ್ನಾಗಿದೆಯೋ ನೋಡಬಹುದಿತ್ತಲ್ಲ"—ಎಂದೆ.

"ಸರಕಾರಿ ಕಾನೂನು!" ಎಂದ.

"ಕ್ರಯವೇನು?"

"ಹದಿಮೂರಾಣೆ!"

"ಏನಯ್ಯ ಇದು. ನಿನ್ನೆ ಹನ್ನೆರಡಾಣೆಯೆಂದಿದ್ದೆ!"

"ಅದರ ನಂತರ ಇಪ್ಪತ್ತನಾಲ್ಕು ತಾಸು ಕಳೆದುಹೋಗಿದೆ. ರೊಸ್ಟೊವ್ ನಗರ ಹೋಯಿತು!"

"ನಿಜ! ಸಿಂಗಪುರ ಬೀಳುವಾಗ ಆರಂಭಮಾಡಿರುವೆ. ಆದರೆ, ಆಗ ಒಂದೊಂದು ಊರಿಗೆ ಕಾಲಾಣೆಯಂತೆ ಹೆಚ್ಚಿಸುತ್ತಿದ್ದೆ. ಈಗ ಊರಿಗೊಂದಾಣೆಯಂತೆ ಹೆಚ್ಚಿಸಿದರೆ, ಇನ್ನೆರಡು ತಿಂಗಳಲ್ಲಿ ಈ ಚಿಮ್ಣಿಗೆ ಮೂರು ಅಥವಾ ನಾಲ್ಕು ರೂಪಾಯಿ ಕ್ರಯವಾಗಬಹುದೇ?"

ಪುನಃ ನಕ್ಕುಬಿಟ್ಟ ಪುಣ್ಯಾತ್ಮ. ಮತ್ತೆ ಪುನಃ ನನ್ನ ತಲೆ ಮೇಲಿಂದ ಒಂದು ಕಾರಂಜಿ ಹಾರಿಸಿದ.

"ಚಿಂತಿಲ್ಲ. ಇಜಿಪ್ಟಿನಲ್ಲಿ ರೊಮೆಲ್ಲನೂ ರಷ್ಯದ ವೊನ್‌ಬೋಕನೂ ಹಿಂದೆಗೆದರೆ ಏನು ಮಾಡುತ್ತಿ?"

ಗಾಬರಿಯಾಯಿತವನಿಗೆ. "ಏನು? ಹಾಗೆ ಹಿಂದೆಗೆವರೆ?" ಎಂದು ಕೇಳಿದ.

"ತೆಗೆಯದೆ ಇದ್ದಾರೆಯೆ? ಅಂತಹ ಕಾಲದಲ್ಲಿ ನೀನು ಒಂದಾಣೆ ಇಳಿಸುವಿಯಷ್ಟೆ?"

"ಸ್ವಾಮಿ—ಕುಲದೇವರ ಆಣೆ. ಇದು ಕಡೇ ದೀಪ; ಇನ್ನೆಲ್ಲಿ? ಸ್ಟಾಕೂ ಇಲ್ಲ, ಬರುವ ಹಾಗೂ ಇಲ್ಲ."

"ನೀನು ಹೇಳಿದ ಈ ಮಾತಿನಲ್ಲಿ ಸತ್ಯಾಂಶವಿದ್ದರೆ ನಾನು ಬದುಕಿದೆ!" ಎನ್ನುತ್ತ ಐದು ರೂಪಾಯಿಯ ನೋಟನ್ನು ಅವನ ಕೈಯಲ್ಲಿಟ್ಟು ಚಿಲ್ಲರೆ ಕೊಡು ಎಂದೆ. ದೀಪದ ಬೆಲೆ ಹದಿಮೂರಾಣೆ ತೆಗೆದು, ಉಳಿದ ಚಿಲ್ಲರೆ ಹಣ ಕೊಟ್ಟನು.

ಮನೆಗೆ ಹೋಗಿ ಲೆಕ್ಕಹಾಕಿದಾಗ ೯—೩—೦ ಇತ್ತು. ಐದರ

ನೋಟನ್ನು ಹತ್ತರ ನೋಟೆಂದು ತಿಳಿದಿದ್ದನು. ಕೂಡಲೇ ಹೋಗಿ ಕೊಡಲೇ ಎಂದೆಣಿಸಿದೆ. ಆದರೆ, ಬ್ಲೆಕ್‌ಔಟ್ ಕಾಲದಲ್ಲಿ ತನ್ನ ಪತ್ತೆದಾರಿ ಜ್ಞಾನಕ್ಕಾಗಿ ಗೌರವಪಟ್ಟವನಿಗೆ, ಇದನ್ನು ತಿರಿಗಿ ಕೊಟ್ಟರೆ ಅವಮಾನವೆನಿಸದೆ?

ಅವನು ೬೯ ಬಾರಿ ನನ್ನೊಡನೆ ಸುಳ್ಳು ಹೇಳಿ, ಕಳ್ಳತನಮಾಡಿದ್ದನು. ನಾನು ಒಂದು ಬಾರಿ ಸುಳ್ಳು ಹೇಳದೆ ಕಳ್ಳತನ ಮಾಡಿದರೆ ಮತ್ತೂ ೬೮ ಪಾಲಿಗೆ ಅವನೇ ಗೆದ್ದಂತೆ!

ಮನೆಗೆ ಬಂದವನೇ ಹೆಂಡತಿ ಮಕ್ಕಳ ಅವಸರದ ಸಭೆ ಜರಗಿಸಿ, "ಇನ್ನು ದೀಪಗಳ ಆಮದು ಇಲ್ಲ. ಅದುಕಾರಣ, ಇನ್ನು ದೀಪಗಳು ಒಡೆಯಲೇ ಬಾರದು ಎಂದು ಈ ಸಭೆಯು ಠರಾಯಿಸುತ್ತದೆ" ಎಂಬ ಗೊತ್ತುವಳಿ ಮಾಡಿದೆ.

ಈ ಚಿಕ್ಕ ಜಪಾನೀ ಪ್ರತಿನಿಧಿಗಳು (ದೀಪ) ಈಗ ಸೊಕ್ಕಿನಿಂದ ಹಾರುವುದೂ ಇಲ್ಲ; 'ಹರಿಕಿರಿ'.ಮಾಡುವುದೂ ಇಲ್ಲ.

---

## ೨. ಚಿಕ್ಕಪ್ಪನ ಇಝಿಚೆಯರ್

"ಇಝಿಚೆಯರ್" ಎಂದರೆ ನಿಮಗೆಲ್ಲ ಗೊತ್ತು; ಯಾವುದರ ಮೇಲೆ ನೀವು ಮೂರು ತಿಂಗಳ ತನಕ ನಿತ್ಯವೂ ಕುಳಿತು ಬೆನ್ನು ಶಾಶ್ವತವಾಗಿ ಬಗ್ಗುವಂತಹ ಪರಮಾನಂದಕರ ಅಂಗವಿಕಾರವಾಗುವುದೋ ಆ ವಸ್ತು. ನನ್ನ ಚಿಕ್ಕಪ್ಪನಾರೆಂದು ನಿಮಗರಿಯದು. ಆದಕಾರಣ ಅವನ ಇಝಿಚೆಯರಿನ ಕತೆಯನ್ನು ನಿಮಗೆ ಹೇಳಿದರೆ ಯಾವ ಹಾನಿಯೂ ಇಲ್ಲ. ಅವನಾಗಿ ನಿಮಗೆ ಹೇಳುವಂತಿಲ್ಲ. ಏಕೆಂದರೆ ಆ ಕತೆ ಹೇಳತೊಡಗಿದರೆ ಅವನಿಗೆ ಅತಿ ಕಹಿಯಾದ ಘಟನೆಗಳ ಸ್ಮರಣೆಯುಂಟಾಗಿ ಅಳುಬರುವುದು.

ಚಿಕ್ಕಪ್ಪನಿಗೆ ಸುಖದ್ದೇ ಚಿಂತೆ. "ಇಝಿಚೆಯರ್ ಎಂದರೆ ಸುಖ; ಸಡಿಲಾದ ಆತ್ಮ" ಎಂದು ಅವನನ್ನುತ್ತಿದ್ದನು. ಯಾರು ಬರೇ ನೆಲದ ಮೇಲೆ ಕುಳಿತುಕೊಳ್ಳುತ್ತಾರೋ ಅಥವಾ ಸಾಮಾನ್ಯ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತಾರೋ ಅವರೊಡನೆ ಮಾತಾಡುವುದೇ ಚಿಕ್ಕಪ್ಪನಿಗಾಗದು.

ಆದುದರಿಂದ ತಾನು ಹೆಚ್ಚಿನ ಸಮಯವನ್ನು ಮನೆಯಲ್ಲಿ, ಒಂದು ಇಝಿು ಚೆಯರಿನಲ್ಲಿ ಕಳೆಯುತ್ತಿದ್ದನು.

ಇಝಿುಚೆಯರಿನಲ್ಲಿ ಎಲ್ಲವೂ 'ಇಝಿು' ಇರಬೇಕು. ಚಿಕ್ಕಪ್ಪನು ಸಿಕ್ಕವರ ತಲೆದಿಂಬುಗಳನ್ನೆಲ್ಲ ತಂದು ಇಝಿುಚೆಯರಿನಲ್ಲಿ ಅಲ್ಲಲ್ಲಿ ಕ್ರಮವಾಗಿ ಇಟ್ಟು, ಅದರಲ್ಲಿ ಹೂತು ಕುಳಿತುಕೊಳ್ಳುತ್ತಿದ್ದನು. ನಮ್ಮ ಮನೆಯಲ್ಲಿ ಅಡುಗೆಮಾಡುವ ಗಂಗಕ್ಕನ ತಲೆದಿಂಬೂ ನಿತ್ಯವೂ ಆ ಇಝಿುಚೆಯರಿನ ತಲೆಗಿಂಬು ರಾಶಿಯಲ್ಲಿ ಸೇರಿಹೋಗುವುದುಂಟು. ಗಂಗಕ್ಕನಿಗೆ ಒಂದು ದಿನ ಕೋಪ ಬಂದು, ಚಿಕ್ಕಪ್ಪನು ಎಲ್ಲಿಗೋ ಹೋಗಿದ್ದಾಗ, ಎಲ್ಲ ತಲೆ ಗಿಂಬುಗಳನ್ನೂ ಅಡುಗೆಕೋಣೆಗೆ ತಂದು, ರಾಶಿಯೊಡ್ಡಿ ಸ್ವಸ್ತ ಮಲಗಿದಳು. ಗಂಗಕ್ಕನಿಗೆ ಪ್ರಶ್ನಿಸುವ ಧೈರ್ಯ ಚಿಕ್ಕಪ್ಪನಿಗೆ ಇಲ್ಲ; ಚಿಕ್ಕಮ್ಮನಿಗೂ ಇಲ್ಲ. ಆದರೆ, ತನ್ನ ಇಝಿುಚೆಯರ್ ಸುಖಕ್ಕೆ ಭಂಗ ಬಂದ ಕಾಲಕ್ಕೆ ಸಾಸಿವೆಯಷ್ಟು ಧೈರ್ಯವುಂಟಾಗಿ ಗಂಗಕ್ಕನನ್ನು ಪ್ರಶ್ನಿಸಿದನು. ಗಂಗಕ್ಕನು ಅತಿ ದೊಡ್ಡ ಸ್ವರದಲ್ಲಿ ಬಯ್ದು, ಧಾರಾಳ ಅತ್ತಳು. ಚಿಕ್ಕಮ್ಮನೂ ಅತ್ತಳು. ಎರಡು ಸ್ತ್ರೀ ರತ್ನಗಳೂ ತನಗೆದುರಾಗಿ ಅಳುವುದನ್ನು ಕಂಡು ಚಿಕ್ಕಪ್ಪನೂ ಅಳು ತ್ತಿದ್ದನೇನೊ. ಆದರೆ, ಅಷ್ಟರಲ್ಲಿ ಗಂಗಕ್ಕನು, "ನಿನಗೆ ವಿಶೇಷ ಸುಖ ಬೇಕಾದರೆ, ನಿನಗೊಪ್ಪುವ ಒಂದು ಕುರ್ಚಿಯನ್ನೇಕೆ ಮಾಡಿಸಿಕೊಳ್ಳುವು ದಿಲ್ಲ?" ಎಂದಳು. "ಅಹುದು, ಏಕೆ ಮಾಡಿಸಿಕೊಳ್ಳಬಾರದು?" ಎಂದು ಚಿಕ್ಕಮ್ಮನೂ ಕೇಳಿದಳು.

"ಒಂದು ಕುರ್ಚಿ?"—ನನ್ನ ಚಿಕ್ಕಪ್ಪನ ಕಣ್ಣುಗಳು ನಲಿದಾಡಿದುವು. "ಅಹುದು; ಮಾಡುವೆನು!" ಎಂದನು. ಅಲ್ಲೀಗ ತೊಂದರೆಯಾರಂಭ ವಾದುದು.

ಚಿಕ್ಕಪ್ಪನು ಬುದ್ಧನಂತೆ ಏಳು ದಿನಗಳ ವರೆಗೆ ಮೌನವಾದನು. ಅವನ ಆ ಮಹಾಮಿದುಳಿನಲ್ಲಿ ಅದ್ಭುತ ಆಸನವೊಂದರ ರಚನೆಯ ಕ್ರಮವು ಸುಳಿದಾಡುತಿತ್ತೆಂದು ಪ್ರತೀತಿಯಿದೆ. ಎಂಟನೆಯ ದಿನದಲ್ಲಿ ಚಿಕ್ಕಪ್ಪನಿಗೆ ತಲೆಯೊಳಗೆ ಸ್ವಲ್ಪ ಬೆಳಕು ಮೂಡಿತು. (೧) ಆಸನದಲ್ಲಿ ಭಾರವು ಸರಿ ಯಾಗಿ ಹಂಚಲ್ಪಟ್ಟಿರಬೇಕು. (೨) ಎಲ್ಲಿ ನಮ್ಮ ಅಂಗಗಳು ಬಾತಿವೆಯೋ ಅವು ಸರಿಯಾಗಿ ಕುಳಿತುಕೊಳ್ಳಬೇಕು; ಮತ್ತು ದೇಹದ ಯಾವ ಭಾಗವು

ಸಾಮಾನ್ಯ ಆಸನವನ್ನು ಮುಟ್ಟದೆ ಬರಿದಾಗಿ ನಿಲ್ಲುವುದೋ ಅಲ್ಲಿ ಆಸನವೂ ಸ್ಪರ್ಶವಾಗಿ ನಿಲ್ಲುವಂತಿರಬೇಕು; ಹೀಗಾದರೆ ಅದು ಪರಿಪೂರ್ಣ ಆಸನವಾಗುವುದು,—ಎಂದು ಅವನು ಕಂಡುಹಿಡಿದನು. ಮತ್ತೆ, ಚಿಕ್ಕಮ್ಮನನ್ನು ಕರೆದು ವಿವರಿಸಿದನು.

"ಸಿಮೆಂಟಿಗೆ ಸಣ್ಣಗಿನ ಕಲ್ಲು ಚೂರನ್ನು ಬೆರಸಿ, ನೀರು ಹಾಕಿ ಕಲಿಸಿ ರಾಶಿಯೊಡ್ಡಿ, ಕೂಡಲೇ ನಾವು ಅದರಲ್ಲಿ ಮಲಗಬೇಕು; ಕೂಡಲೇ ಏಳಬೇಕು. ಅಂದರೆ, ಅಲ್ಲಿ ನಮ್ಮ ದೇಹದ ಅಚ್ಚು ಒತ್ತಿದಂತಾಯಿತು. ಮತ್ತು ಅದನ್ನು ಒಣಗಬಿಟ್ಟರೆ ಅದು ಪರಿಪೂರ್ಣಾಸನ!"

ಈ ಆಸನದಿಂದ ಸುಖ ದೊರೆಯಬಹುದೆಂದು ಚಿಕ್ಕಮ್ಮನು ಒಪ್ಪಲಿಲ್ಲ; ಗಂಗಕ್ಕನೂ ಒಪ್ಪಲಿಲ್ಲ. ಇದನ್ನು ತಾನು ಬರೇ ಉದಾಹರಣಾರ್ಥ ಹೇಳಿದೆನೆಂದು ಚಿಕ್ಕಪ್ಪನೆನ್ನಲು,—ಚಿಕ್ಕಮ್ಮನೂ ಗಂಗಕ್ಕನೂ ಜಗಳಾಡುವುದನ್ನು ನಿಲ್ಲಿಸಿದರು.

ಮರುದಿನ ಚಿಕ್ಕಪ್ಪನು ಹನ್ನೆರಡು ಕೋಲು ಹಲಗೆ, ಇಪ್ಪತ್ತು ಕೋಲು ರೀಪು, ಎರಡು ಸೇರು ಆಣಿ, ಒಂದು ಗರಗಸ—ಇಷ್ಟನ್ನು ತರಿಸಿ, ನಮ್ಮ ಹಟ್ಟಿಗೆ ತಾಗಿರುವ ಒಂದು ಕೊಠಡಿಯಲ್ಲಿ, ಬಾಗಿಲಿಕ್ಕಿ ಕೆಲಸಕ್ಕಾರಂಭಿಸಿದನು. "ಸ್ವಪ್ರಯಾಸ"—ಹೀಗೆಂದನು.

ಒಂದು ವಾರದ ತನಕ—ಊಟಕ್ಕೆ ಮಾತ್ರ ಎದ್ದು—ಕೆಲಸಮಾಡಿದನು. ಚಿಕ್ಕಮ್ಮನು, "ಶನಿವಾರ—ಒಂದು ಒಳ್ಳೇ ದಿನ ಎಂದು ಕೂಡ ಶಬ್ದಮಾಡದೆ ಇರಲಾಗದು ನಮ್ಮವರಿಗೆ!" ಎಂದು ದೂರಿದಳು. ಗಂಗಕ್ಕನು "ಮರಣ ಬಂತು; ಕಿವಿ ನೂರು ಚೂರು!" ಎಂದಳು. ಚಿಕ್ಕಪ್ಪನು ಇದಕ್ಕೇನು ಉತ್ತರವಿತ್ತನೋ ಯಾರೂ ಅರಿಯರು. ಆದರೆ, ಚಿಕ್ಕಮ್ಮನಾಗಲಿ ಗಂಗಕ್ಕನಾಗಲಿ ಚಿಕ್ಕಪ್ಪನಿಗೆ ಪುನಃ ಆತಂಕಿಸಿದ ದಾಖಲೆ ಇಲ್ಲ.

ರವಿವಾರ ರಾತ್ರೆ ಚಿಕ್ಕಪ್ಪನು ಸುಖವಾಗಿ ನಿದ್ದೆಹೋದುದು ಗೊತ್ತಿದೆ. ಏನೋ ಹೆಬ್ಬೆಟ್ಟು ಉಳಿಯ ಪೆಟ್ಟು ತಗಲಿ ಬಾತುಕೊಂಡಿತ್ತು; ಎರಡು ಬೆರಳುಗಳ ಮೇಲಿಂದ ಗರಗಸವು ಲಘುವಾಗಿ ಪಯಣ ಬೆಳೆಸಿತ್ತು. ಸೋಮವಾರ, ತನಗೆ ಮೈಯಿಡೀ ನೋವೆಂದನು. ಆ ವಾರ ಕಳೆಯಬೇಕಾದರೆ,

ಚಿಕ್ಕಪ್ಪನಿಗೆ ನ್ಯೂಮೋನಿಯವೆಂದರು. "ಈ ಕುರ್ಚಿ ಕರ್ಮವೆಲ್ಲ ನನ್ನ ಮೇಲೆ ಬಂತು!" ಎಂದು ನಿತ್ಯವೂ ದೂರುತ್ತಾ ಚಿಕ್ಕಮ್ಮನು ಒಂದು ತಿಂಗಳ ಕಾಲ ಪತಿಸೇವೆ ಮಾಡಿ, ಗೆದ್ದಳು.

ಸಾಮಾನ್ಯ ಮನುಷ್ಯನಾದರೂ ಈ ಅಸ್ವಸ್ಥವನ್ನು ದೇವರಿಂದ ಬಂದ ಎಚ್ಚರಿಕೆಯೆಂದು ತಿಳಕೊಳ್ಳುತ್ತಿದ್ದನಷ್ಟೆ? ಆದರೆ, ಚಿಕ್ಕಪ್ಪನು ಮಾತ್ರ ಹಟವಾದಿ. ಪರಿಪೂರ್ಣ ಆಸನವನ್ನು ತಾನು ನಿರ್ಮಿಸದೆ ಬಿಡಲಾರೆನೆಂದನು. ಈ ಮೊದಲು ಅವನು ಹಟ್ಟಿ ಬಳಿಗೊಯ್ದು ಹಲಗೆ, ಉಳಿ, ಗರಗಸ ಮೊದಲಾದುವಲ್ಲದೆ ಒಂದು ದೀಪವನ್ನೂ ಒಯ್ದನು. "ಮುದುಕನು ಹಟ್ಟಿಗೆ ಬೆಂಕಿಯಿಡದಿದ್ದರೆ ನನ್ನ ಹೆಸರು ಗೌರಿ ಅಲ್ಲ" ಎಂದು ಚಿಕ್ಕಮ್ಮನಂದಳು; "ನನ್ನವರು ನೆಲದಲ್ಲೆ ಕುಳಿತಾಗ ಏನೂ ಸಾಯಲಿಲ್ಲ" ಎಂದು ವಿಧವೆ ಗಂಗಕ್ಕನೂ ಹೇಳಿದಳು. ಚಿಕ್ಕಪ್ಪನು ಮಾತಿನ ಮಲ್ಲನಲ್ಲ; ಕೆಲಸವನ್ನು ಸಾಗಿಸಿದನು.

ಬಹುಶಃ ಆಸನದ ಮರದ ಕೆಲಸವು ಮುಗಿದಿರಬೇಕು. ಇಲ್ಲದಿದ್ದರೆ ಚಿಕ್ಕಪ್ಪನ ಮುಖದಲ್ಲಿ ಅಷ್ಟೊಂದು ಸುಖಕರ ಭಾವ ಹೇಗೆ ಕಾಣಬೇಕು! ಅದಕ್ಕೊಂದು ವಸ್ತ್ರ ಹೊಲಿಯಬೇಕಿತ್ತೆಂದು ತೋರುವುದು. ಚಿಕ್ಕಪ್ಪನು ಸೂಜಿ ತರುವಂತೆ ಗಂಗಕ್ಕನಿಗೇ ಹೇಳಿದನು. ಗಂಗಕ್ಕನು ಐವತ್ತು ಸೂಜಿ ತಂದಳು. ಒಂದು ಸೂಜಿ ತರಲು ಹೇಳಿದರೆ ಐವತ್ತು ತಂದಳೆಂದು ಚಿಕ್ಕಪ್ಪನು ಗೊಣಗುಟ್ಟುತ್ತ, ಒಟ್ಟು ಅರುವತ್ತಮೂರು ಸೂಜಿಗಳಲ್ಲಿ ತನ್ನ ಕೆಲಸ ಮುಗಿಸಿದನು. ವಸ್ತ್ರದ ಮೇಲೆ ತೊಗಲಿನಂತಹ ಒಂದು ವಸ್ತುವನ್ನೂ ಹೊಲಿದನು. ಅದು ಸತ್ತ ಎಮ್ಮೆಯ ಚರ್ಮವೆಂದು ಚಿಕ್ಕಮ್ಮ ಉಗುಳುಗುಳಿ, ಕೆಮ್ಮುತ್ತ, ಬಾಡಿದಳು; ಗಂಗಕ್ಕನು ಅಸಹನೀಯ ದುರ್ವಾಸನೆ ಬರುತ್ತಿದೆಯೆಂದು ದೂರುತ್ತ, ನಶ್ಯವನ್ನು ಸ್ವಲ್ಪ ಹೆಚ್ಚಿಸಿದಳು.

ಒಂದು ವಾರದ ನಂತರ ಆ ಮಹಾ ಆಸನವು ಪರಿಪೂರ್ಣವಾಗಿ ಹೊರಗೆ ಬಂತು. ಚಿಕ್ಕಮ್ಮನಿಗೂ ಗಂಗಕ್ಕನಿಗೂ ಕಣ್ಣುಗಳು ಆಶ್ಚರ್ಯದಿಂದರಳಿದುವು. ಇಡೀ ಆಸನವು, ನಿರ್ವಾಣಕ್ಕೆ ಹೊರಟ ಕುದುರೆಯಂತಿತ್ತು. ಅದರ ಬೆನ್ನು ಬಲು ಎತ್ತರವಾಗಿದ್ದು, "ನನ್ನನ್ನೇರಿ ಸುಖವಾಗಿ ಕುಳಿತರೆ ಸಾವಿರ ರೂಪಾಯಿ ಇನಾಂ" ಎಂದು ಪಂಥಗಟ್ಟಿ ಆಹ್ವಾನಿಸುತ್ತಿದೆಯೋ

ಎಂಬಂತಿತ್ತು. ಅದರ ಮೇಲೆ ಹಾಸಿದ ವಸ್ತುವು, ಮಹಾ ರಾಕ್ಷಸನೊಬ್ಬ ನನ್ನು ಸೀಳಿ ಅಲ್ಲಿ ತಂದು ಮಲಗಿಸಿದಂತೆ ಕಾಣುತಿತ್ತು.

ಚಿಕ್ಕಪ್ಪನು ಅದನ್ನೇರಿ ಕುಳಿತನು. "ನೆರೆಮನೆ ಸೀತಾರಾಮಯ್ಯ ನನ್ನು ಕರೆಯಿರಿ" ಎಂದನು. ನಾನು ಓಡಿಹೋಗಿ ಈ ಅದ್ಭುತ ಆಸನದ ಪ್ರಾರಂಭೋತ್ಸವಕ್ಕೆ ಸೀತಾರಾಮಯ್ಯನವರನ್ನು ಕರೆದೆ. ಕಾಫಿ ತಾರೆಂದು ಚಿಕ್ಕಪ್ಪನು ಆಜ್ಞಾಪಿಸಲು, "ಈ ವೇಳೆಯಲ್ಲಿ ಕಾಫಿ!" ಎನ್ನುತ್ತ ಗಂಗಕ್ಕನು ಎರಡು ತಟ್ಟೆ ಕಾಫಿ ತಂದಳು. ಚಿಕ್ಕಪ್ಪನು ಒಂದು ತಟ್ಟೆಯನ್ನು ಸೀತಾ ರಾಮಯ್ಯನವರ ಕೈಗೆ ಕೊಡುತ್ತ, ಒಂದನ್ನು ತಾನು ಹಿಡಿದು,—"ನೀವು ಈ ಹೊಸ ಕುರ್ಚಿಯ ವಿಷಯ ಏನೂ ಪ್ರಶ್ನೆ ಕೇಳಿಲ್ಲವಲ್ಲ!" ಎಂದನು.

ಸೀತಾರಾಮಯ್ಯನವರು ಬಹು ಶಾಂತ ಸ್ವಭಾವಿ. ಅವರು ಅದ್ಭುತ ವಸ್ತುವನ್ನು ನೋಡಿದರೆ ಬೆರಗಾಗಿ, ಅಲ್ಲೆ ತಣ್ಣಗಾಗುವವರು. ಚಿಕ್ಕಪ್ಪನು ಧೈರ್ಯಗೊಟ್ಟನೆಂದು ಸೀತಾರಾಮಯ್ಯನವರು—"ನಾನು ಆಶ್ಚರ್ಯಪಡು ತ್ತಿದ್ದೇನೆ" ಎಂದರು.

"ಆಶ್ಚರ್ಯ? ಇನ್ನೂ ಇದೆ, ನೋಡಿರಿ!" ಎನ್ನುತ್ತ ಚಿಕ್ಕಪ್ಪನು ಕುರ್ಚಿಯಲ್ಲಿ ಕೈಯಿಡುವಲ್ಲಿಂದ ಕೆಳಗೆ ಬೆರಳುದೂಡಿ, ಒಂದು ಹಲಗೆ ಯನ್ನೆಳೆದು, ಅದರಲ್ಲಿ ತನ್ನ ಕಾಫಿ ತಟ್ಟೆ ಇಟ್ಟು, "ಹೇಗೆ?" ಎಂದು ವಿಜಯಸೂಚಕ ದೃಷ್ಟಿಯಿಂದ ನೋಡುತ್ತ, ಹಿಂದಕ್ಕೊರಗಿದನು.

ಅಷ್ಟೆ! ಐದಾರು ಮನೆಮಾಡುಗಳು ಒಂದೇ ಬಾರಿಗೆ ಚೂರಾದಂತೆ ಶಬ್ದವಾಯಿತು. ಈ ಶಬ್ದವು ಎಲ್ಲಿ ಎಂದು ಸೀತಾರಾಮಯ್ಯನವರು ಆಶ್ಚರ್ಯ ಪಡುವಷ್ಟರಲ್ಲಿ, ಚಿಕ್ಕಪ್ಪನ ಕಾಫಿ ತಟ್ಟೆಯು ಏಳಡಿ ಎತ್ತರಕ್ಕೆ ನೆಗೆದು ಒಂದು ತಟಕು ಕಾಫಿಯನ್ನು ಕೂಡ ಅಲ್ಲಿಂದ ಬೇರೆಲ್ಲಿಯೂ ಚೆಲ್ಲದೆ ನೆಟ್ಟಗೆ ಸೀತಾರಾಮಯ್ಯನವರ ಮುಖಕ್ಕೇ ತಂದಿಳಿಸಿತು. "ಹೀಇಇಇ ಹಿಕ್!" ಎಂದು ಸೀತಾರಾಮಯ್ಯನವರು ಕೂಗಲು, ಅವರು ಇಹದ ವ್ಯಾಪಾರವನ್ನು ಮುಗಿಸಿದರೆಂದು ನೆನದು ನನ್ನ ಎದೆಯ ಬಡಿದಾಟ ಒಮ್ಮೆಗೆ ನಿಂತಂತಾಯಿತು. ಚಿಕ್ಕಪ್ಪನು ಅಲ್ಲೆಲ್ಲೂ ಕಾಣಿಸುತ್ತಿದ್ದಿಲ್ಲ. ಚಿಕ್ಕಮ್ಮನು ಓಡಿಬಂದು ರೀಪು ಮತ್ತು ಹಲಗೆಯ ರಾಶಿಯಡಿಗೆ ಬಿದ್ದ ಒಬ್ಬ ಪುರುಷನನ್ನು ಮೇಲಕ್ಕೆಳೆಯ ಹೋಗಿ ತಾನೂ ಬಿದ್ದು, ಅರ್ಧ ಕಾಣೆಯಾದಳು. ಕೊನೆಗೆ ಆ ಪುರುಷನೂ

ಚಿಕ್ಕಮ್ಮನೂ ಎದ್ದರು. ಎದ್ದ ಪುರುಷನು ನನ್ನ ಚಿಕ್ಕಪ್ಪನೆಂದು ನನಗೆ ಗುರುತು ಹತ್ತಲು ಮೂರು ನಿಮಿಷ ಬೇಕಾಯಿತು.

ಸೀತಾರಾಮಯ್ಯನವರ ವಿಷಯ ಏನಂತೆ? ಅವರು ತೀರಿಹೋದರೇ ಎಂದು ಯಾರಾದರೂ ಕೇಳಬಹುದು. ಇಲ್ಲವೆಂದು ನಾನು ಅವರನ್ನು ನಿರಾಶೆಗೊಳಿಸಬೇಕಾಗಿದೆ. ಕಾಫಿ ತಟ್ಟೆಯು ಬಿಸಿ ಕಾಫಿ ಸಮೇತ ಮುಖಕ್ಕೇ ಬಿದ್ದು ಅಡ್ಡಾದ ಸೀತಾರಾಮಯ್ಯನವರನ್ನು ಎಬ್ಬಿಸಲು ಗಂಗಕ್ಕನು ಹೋಗಿ, ನೆಲಕ್ಕೆ ಬಿದ್ದ ಕಾಫಿಯ ಮೇಲಿಂದ ಕಾಲುಜಾರಿ ಸೀತಾರಾಮಯ್ಯನವರ ಮೇಲೆ ಕುಳಿತಂತಾಗಲು, ಒಂದು ಕಾಫಿಯ ತಟ್ಟೆಯು ಸೀತಾರಾಮಯ್ಯ ನವರ ಎದೆಯ ಮೇಲೆ ಗಂಗಾಭಾರದಿಂದ ಚೂರಾಗಿ,—ಚೂರುಗಳು ಅವರ ವೆಸ್ಟ್‌ಕೋಟಿನೊಳಗೆ ಹೊಕ್ಕಿ ಕುಳಿತುವೆಂದು ಗೊತ್ತಾಯಿತು. ಸೀತಾ ರಾಮಯ್ಯನವರು, ರಾಮಮೂರ್ತಿಯವರು ದೊಡ್ಡ ಕಲ್ಲನ್ನು ಎದೆಯ ಮೇಲಿಂದ ತೆಗೆದು ಬಿಸುಡುವಂತೆ ಗಂಗಕ್ಕನನ್ನು ಐದಡಿ ದೂರಕ್ಕೆ ಹಾರಿಸಿ ಎದ್ದು ಕುಳಿತು, ತಮ್ಮ ಮುಖದ ಮೇಲೆ ಬಿದ್ದ ಕಾಫಿಯಿಂದೊಂದಂಶವನ್ನು ತುಟಿ ಸವರಿ, ಸಿಹಿ ನೋಡಿ, ಮೂರು ನಿಮಿಷ ಮಂಕನಂತೆ ನೋಡಿ, ಕೊನೆಗೆ ದೊಡ್ಡ ಸ್ಫೋಟನವಾದಂತೆ ಫಕ್ಕನೆ ನಕ್ಕುಬಿಟ್ಟರು. ಅವರ ಜನ್ಮ ದಲ್ಲಿ ಇದುವೇ ಮೊದಲಿನ ಮತ್ತು ಕೊನೆಯ ನಗು—ಎಂದು ಹೇಳುವರು.

ಸೀತಾರಾಮಯ್ಯನವರ ನಗು ನೋಡಿ ಚಿಕ್ಕಮ್ಮನಿಗೆ ನಗು ಬಂತು; ಚಿಕ್ಕಮ್ಮನ ನಗು ನೋಡಿ ಗಂಗಕ್ಕನಿಗೆ ನಗು ಬಂತು. ಚಿಕ್ಕಪ್ಪನು ಮಾತ್ರ ನಗಲಿಲ್ಲ; ಅಳಲೂ ಇಲ್ಲ.

ಚಿಕ್ಕಪ್ಪನನ್ನು ವೈದ್ಯರೂ ಚಿಕ್ಕಮ್ಮನೂ ಕೂಡಿ, ಹದಿನಾಲ್ಕು ದಿನ ಶುಶ್ರೂಷೆ ಮಾಡಿ, ಬೆನ್ನು, ಕಾಲು, ಕೈಗಳಿಗೆಲ್ಲ ತೈಲಗಳನ್ನು ಸವರಿ, ಸರಿ ಮಾಡಿದರು. ವೈದ್ಯರು, ದೀಪ, ಹಲಗೆ, ತುಂಡಾದ ಸೂಜಿ, ಒಡೆದ ತಟ್ಟೆ- ಮೊದಲಾದುದರ ಒಟ್ಟು ವೆಚ್ಚ ನೂರಐವತ್ತೇಳು ರೂಪಾಯಿ ಎಂದು ಚಿಕ್ಕಮ್ಮ ಲೆಕ್ಕಹಾಕಿರುವಳು.

ಈ ಮಹಾ ಅದ್ಭುತ ಆಸನವೀಗ ಹಟ್ಟಿಯ ಅಟ್ಟದ ಮೇಲಿದೆ. ಕೆಳ ಗಿರುವ ದನಗಳಿಗೆ ಅದರಿಂದ ಒಂದು ದಿನ ಅಪಾಯವಿದೆಯೋ ಎಂದು ಗಂಗಕ್ಕನಿಗೆ ಸಂದೇಹ. ಚಿಕ್ಕಪ್ಪನೀಗ ಕ್ರಯಕೊಟ್ಟು ತಂದ ಮೂರು

ರೂಪಾಯಿಯ ಇಸ್ಪೀಟೆಲೆಯರಿನಲ್ಲಿ ಕುಳಿತುಕೊಳ್ಳುತ್ತಿದ್ದಾನೆ. ಈಗ 'ಸುಖ' ಎನ್ನುವುದಿಲ್ಲ. ಕುಳಿತಲ್ಲಿ ಏನೇನೋ ಆಲೋಚನೆ ಮಾಡುತ್ತಿದ್ದಾನೆ. ಆ ಆಲೋಚನೆಗಳೇನು ಎಂದು ಕೇಳುವ ಧೈರ್ಯ ನಮಗಿಲ್ಲ.

---

# ೩. ಗಿಳಿ

ಭಾರೀ ಹೆಂಗುಸರನ್ನು ಭೇಟಿಯಾಗಿ, ಅವರೊಡನೆ ಸಂಭಾಷಿಸಿ, ಅವರ ದುಃಖಚರಿತ್ರವನ್ನು ಕೇಳಿ,—ಓದುವವನ ಎದೆಯೊಡೆವಂತಹ ಕತೆಗಳನ್ನು ಬರೆದವರಿದ್ದಾರೆ. ವೇಶ್ಯೆಯೊಬ್ಬಳು 'ವೇಶ್ಯೆ ಏಕಾದಳು' ಎಂದು ಮಾರ್ಮಿಕವಾಗಿ ವರ್ಣಿಸಿದ್ದಾರೆ. ನಾನೂ ಓರ್ವ ಹತಭಾಗಿನಿಯನ್ನು ಕಂಡೆ; ಕಲಿತೆ. ಹೇಳುವ ಕ್ರಮದಲ್ಲೇನೊ ಸ್ವಾಭಾವಿಕತೆ ತೋರದೆನ್ನುವವರೂ ಇರಬಹುದು. ಆದರೆ, ಇಲ್ಲಿ ಹೇಳಿದುದೆಲ್ಲ ಸತ್ಯವೆಂಬುದನ್ನು ತಿಳಕೊಂಡರೆ, ವಿಶೇಷ ತ್ರಾಸವಿಲ್ಲದೆ ಓದಬಹುದು.

ಮನಸ್ಸಿನಲ್ಲಿ ದುಃಖವಿತ್ತು. "ಸಾಸಿವೆಕಾಳಷ್ಟೂ ಯೋಗ್ಯತೆ ಬೇಡವೆ!" ಎಂದು ನನ್ನ ಗೃಹಲಕ್ಷ್ಮಿ ಹೇಳಿದುದು ಮನಸ್ಸಿನಲ್ಲಿ ಕಡಿಯುತಿತ್ತು. ಸಾಸಿವೆಕಾಳಿಗಿಂತ ಚಿಕ್ಕ ವಸ್ತುವನ್ನು ಆಕೆ ನೋಡಲಿಲ್ಲವೆಂದು ಸಮಾಧಾನ ಮಾಡಿಕೊಳ್ಳಲೆತ್ನಿಸಿದರೂ ಸ್ವಲ್ಪ ಸ್ವಲ್ಪವಾಗಿ ಹನಿಯುತ್ತಿದ್ದ ಮಳೆಯ ದೆಸೆಯಿಂದ ಆತ್ಮವು ಸಂತೋಷದಿಂದ ನಲಿಯಲೊಪ್ಪಲಿಲ್ಲ. ರಸ್ತೆಯಲ್ಲಿನ ವಿದ್ಯುದ್ದೀಪಗಳಲ್ಲಿ ಒಂದು ಆ ದಿನ ಏನೋ ಕಾರಣದಿಂದ ಆರಿತ್ತು. ನಿತ್ಯವೂ ಬೆಳಕು ಬೀಳುವಲ್ಲಿ ಇಂದೇಕೆ ಹೀಗೆ ಕತ್ತಲೆಯುಂಟಾಯಿತು? ಹೀಗೂ ನನ್ನ ದುಃಖವು ಹೆಚ್ಚಬೇಕೇ—ಎಂದು ಆ ಕಂಭದ ಕಡೆ ನೋಡುವಾಗ, ಕಂಭಕ್ಕೊರಗಿ ಸಾಕ್ಷಾತ್ ಲಕ್ಷ್ಮಿದೇವಿಯೇ ನಿಂತುದು ಕಂಡುಬಂತು.

ನನಗೆ ವ್ಯಾಮೋಹವುಂಟಾಗಲಿಲ್ಲ; "ನೀನು ಮಾನವಿಯಲ್ಲವೆಂದು ನನ್ನ ಅಭಿಪ್ರಾಯ. ಏಕೆ ನಿಂತೆ ಲಕ್ಷ್ಮಿದೇವಿ ನೀನು ಇಲ್ಲಿ?" ಎಂದು ಕೇಳಿದೆ.

"ನಾನು ಲಕ್ಷ್ಮಿದೇವಿಯಲ್ಲ, ಹೀಗೆ ನನ್ನನ್ನು ತಿವಿಯಬೇಡಿರಿ. ಬಡವಿಯ ಮೇಲೆ ಅಪಹಾಸ್ಯದ ಪ್ರಹಾರವೇ?" ಎಂದಳು.

"ಮತ್ತಾರು ತಾಯಿ ನೀನು?" ಎಂದು ಕೇಳಿದೆ.

"ಗೀಳಿ!" ಎಂದಳು.

"ಗೀಳಿಯೋ—ಗಿಳಿಯೋ?"

"ಗೀಳಿ; ನಡುವೆ ದೀರ್ಘವಿಲ್ಲ!"

"ಒಳ್ಳೆ ಹೆಸರು! ನಾನು ಕಲ್ಕು-ಬೆಕ್ರಿ-ಮನ್ನಿ-ಕಿಣ್ಕಿ-ಯಯ್ಯು-ಮೊದಲಾದ ಹಿಂದೂ ಹೆಸರುಗಳನ್ನೂ,—ಬೆಟ್ಸಿ-ಗಲ್ಸಿ-ವಿಲ್ಸಿ-ನಿರ್ಸಿ ಮೊದಲಾದ ಕ್ರೈಸ್ತ ಹೆಸರುಗಳನ್ನೂ ಕೇಳಿದ್ದೇನೆ. ನಿನ್ನಷ್ಟು ಸುಂದರ ಹೆಸರನ್ನು ಕೇಳಿಲ್ಲ. ನೀನಾವ ಜಾತಿ ಅಮ್ಮ, ನಾಗಜಾತಿಯೋ?" ಎಂದು ವಿನಯ ಪೂರ್ವಕವಾಗಿ ಕೇಳಿದೆ.

ಗೀಳಿ ಗಳಗಳನೆ ಅತ್ತಳು. "ಪುರುಷರು ಅನಾಥೆ--ಬಡವೆ--ಅಬಲೆಯನ್ನು ಈ ರೀತಿ ನೋಯಿಸಿಯೂ ಅವರು ಸಹಿಸಿ, ಉಳಿವರಲ್ಲವೇ! ನನ್ನ ಹೆಸರು ನಿಮಗೆ ಶೂಲವಾಯಿತೇ?" ಎಂದು ಕೇಳಿದಳು.

ನಿಜವಾಗಿ ಇಲ್ಲವೆಂದೆ. 'ಗೀಳಿ'ಯಂತಹ ಸುಂದರ ಹೆಸರನ್ನು ನನ್ನ ಜನ್ಮದಲ್ಲಿ ಇದೇ ಮೊದಲನೆ ಬಾರಿ ಕೇಳಿದವನಾಗಿ, ಆಶ್ಚರ್ಯ ಆನಂದಗಳ ಸಮ್ಮಿಶ್ರ ಭಾವದಿಂದ ಕೆಲವು ಮಾತುಗಳು ಅವಸರವಾಗಿ ನನ್ನ ಬಾಯಿಯಿಂದ ಹೊರಟುವೆಂದು ಆಕೆಗೆ ಸೂಕ್ಷ್ಮವಾಗಿ ತಿಳಿಸಿ, ಅವಳ ಅತಿ ಎಳೆಯ ಹೃದಯದಲ್ಲಿ ಏನಾದರೂ ನೋವುಂಟಾದ ಸಂಭವದಲ್ಲಿ ಈ ಪುರುಷನು ಯಾವ ಬೆಲೆ ತೆತ್ತೂ ಆ ನೋವಾದ ಅಂಶವನ್ನು ಸರಿಗೊಳಿಸುವನೆಂದು ವಚನವಿತ್ತೆ.

"ಗೀಳಿ ಎಂಬ ಹೆಸರನ್ನು ನನಗೆ ಕೊಟ್ಟುದು ತಪ್ಪೇ?" ಎಂದು ಕೇಳಿದಳು.

'ನಿಜವಾಗಿ ಅಲ್ಲ'ವೆನ್ನುತ್ತ, "ನಿನ್ನನ್ನು 'ಸೀಳಿ' ಎಂದು ಕರೆದರೂ—'ಕೋಳಿ' ಎಂದು ಹೆಸರಿಸಿದರೂ ನನ್ನ ಮನೋಭಾವವು ಬದಲಾಗದು" ಎಂದು ಮತ್ತೊಂದು ವಚನವಿತ್ತೆ.

"ನನ್ನ ಜೀವನ ಚರಿತ್ರವನ್ನು ನೀವು ಕೇಳತೊಡಗಿದರೆ ನನಗಾಗಿ ನಿಮ್ಮ ಹೃದಯವು ಕರಗುವುದು" ಎಂದಳು.

ನನಗೆ ಅನಾಥ ಅಬಲೆಯರ ವಿಷಯವಾಗಿ ದೊಡ್ಡ ದೊಡ್ಡ ಕಥೆಗಳು

ಮಿಂಚಿನ ವೇಗದಲ್ಲಿ ನೆನಪಿಗೆ ಬಂದುವು. ನೂರಾರು ಆಲೋಚನೆಗಳೂ ಆದುವು. ರೋಮಾಂಚನವಾಯಿತು. "ಕರಗಿದೆ. ನಿನಗೆ ತ್ರಾಸವಾಗದಿದ್ದರೆ, ನಿನ್ನ ಆಕ್ಷೇಪವಿಲ್ಲದಿದ್ದರೆ ಕೇಳುವೆನು" ಎಂದೆ.

ಗೀಳಿ ಆರಂಭಿಸಿದಳು—

"ನಾನು ಶ್ರೀಮಂತ ಕುಲದಲ್ಲಿ ಹುಟ್ಟಿದೆನು. ನನಗೆ ಏಳು ದಿವಸ ಪ್ರಾಯವಾದಾಗ ನನ್ನ ತಾಯಿಯೂ ತಂದೆಯೂ ಇಹವನ್ನು ತ್ಯಜಿಸಿದರು. ಸೇವಕರೆಲ್ಲ ತೊಲಗಿದರು. ಓರ್ವ ವೃದ್ಧೆಯು ಇದೆಲ್ಲವನ್ನು ಸಹಿಸಲಾಗದೆ ಪ್ರಾಣತ್ಯಾಗ ಮಾಡಿದಳು. ನನ್ನನ್ನು ಮಂದಾಕಿನಿ ಎಂಬ ಹೆಂಗಸು ಕರುಣೆ ತಾಳಿ ಕಾಪಾಡದಿದ್ದರೆ, ಇಂದು ನಾನು ಈ ಕಂಭದಡಿ ನಿಂತು ತಮ್ಮಂತಹ ಕರುಣಾಳುವಿನೊಡನೆ ನನ್ನ ದುಃಖಚರಿತ್ರವನ್ನು ಹೇಳಲು ನಿಲ್ಲುತ್ತಿರಲಿಲ್ಲ!"

ಗೀಳಿಯು ಅಲ್ಲಿ ಅತ್ತಳು. ಅವಳ ರೋದನದಿಂದ ಎದೆಯೊಡೆದ ನಾನು ಸಮಾಧಾನದ ವಾಕ್ಯನ್ನೂ ಹೇಳಲು ಸಮರ್ಥನಾಗದೆ, ಮೌನವಾಗಿ ನಿಂತುಕೊಂಡೆ. ಗೀಳಿಯು ಮುಂದುವರಿಸಿದಳು.

"ಹದಿನಾರು ವರ್ಷ ಪ್ರಾಯದಲ್ಲಿ ಈ ಅಭಾಗಿನಿಯ ರೂಪವು ಲೋಕಕ್ಕೆಲ್ಲ ನಿಂದೆಯ ಆಹಾರವಾಯಿತು. ನನ್ನ ದೃಷ್ಟಿ, ಹೆಜ್ಜೆ, ಸೀರೆ, ಮಾತು—ಎಲ್ಲವುಗಳ ಮೇಲೂ ಟೀಕೆಯಾಯಿತು. ಸಹಿಸುತ್ತಲೇ ಇರುವಾಗ ಮನ್ಮಥನಂತೆ ಕಾಣುವ ಪಾಪಿ ಪುರುಷನೊಬ್ಬನು ಈ ಹತಭಾಗಿನಿಯನ್ನು ಎತ್ತಿ ಒಯ್ದನು."

ಗೀಳಿಯು ಪುನಹ ಅತ್ತಳು. ನಾನು "ಚಿಂತಿಲ್ಲ, ಮುಂದುವರಿಸು" ಎಂದೆ.

ಗೀಳಿ ವಿಧೇಯತನದಿಂದ "ಆಗಲಿ, ನನ್ನ ಹೃದಯವು ಸೀಳಿಹೋದರೂ ನಿಮ್ಮ ಕರುಣೆಯ ಮಾತಿನಿಂದ ಪುನಹ ಸಂದುಗೂಡಿತು. ಮನ್ಮಥಸದೃಶ ಪುರುಷನು ಈ ಪಾಪಿಯನ್ನೊಯ್ದು, ಏನು ಮಾಡಿದನೆಂದು ನೀವೇ ಊಹಿಸಲು ಸಮರ್ಥರು. ಒಂದು ವರುಷದ ನಂತರ ಈ ಗೀಳಿಯು..........." (ಇಲ್ಲಿ ಗೀಳಿಯು ಬಿಕ್ಕಿ ಬಿಕ್ಕಿ ಅತ್ತಳು) "....ಒಂದು ಮಗುವನ್ನು ಹೆತ್ತಳು!"

"ಸೌಖ್ಯವಾಗಿ ಹೆರಿಗೆಯಾಯಿತಷ್ಟೆ?" ಎಂದೆ.

"ಅಯ್ಯೋ, ಸೌಖ್ಯವೇ? ಯಾರಿಗೆ ಬೇಕು ಮಗು?" ಎನ್ನುತ್ತ ಗೀಳಿ

ಮತ್ತೂ ಹೇಳಿದಳು! "ಮಗುವನ್ನು ಗೋಲಕ್ ಎಂಬ ಹೆಂಗುಸಿಗೊಪ್ಪಿಸಿ ಐದು ದಿನದ ಬಾಣಂತಿಯಾದ ನಾನು, ಮಾರ್ಗಕ್ರಮಣ ಮಾಡುತ್ತ ಬಂದೆ. ಈ ಪಟ್ಟಣಕ್ಕೆ ತಲಪುವಾಗ ರಾತ್ರಿಯಾಯಿತು. ಇಲ್ಲಿ ನನ್ನ ತಂದೆಯು ಹಳೆ ಪರಿಚಿತ ವಿದ್ರೂಕರಾಯರೆಂಬವರಿರುವರೆಂದು ಕೇಳಿದ್ದೇನೆ. ಆತನಲ್ಲಿಗೆ ನನ್ನನ್ನು ತಾವು ಒಯ್ದರೆ ಉಪಕಾರ!"

"ವಿದ್ರೂಕರಾಯರೇ? ಸರಿಯಾಗಿ ಆಲೋಚಿಸು. ಆ ಹೆಸರೇ ಈ ಊರಲ್ಲಿಲ್ಲ. ಮುದ್ರಕರಾಯರಿದ್ದಾರೆ, ಕದ್ರಿ ಗಡ್ಸತ್ತಾಯರಿದ್ದಾರೆ. ವಿದ್ರೂಕರಾಯರು ಮಾತ್ರ ಇಲ್ಲ."

ಅಯ್ಯೋ—"ನಾನು ತಪ್ಪಿಲ್ಲ, ನಿಜವಾಗಿ ವಿದ್ರೂಕರಾಯರು. ಅವರ ನಕ್ಷೆ, ನನ್ನ ತಂದೆಯು ಪೆಟ್ಟಿಗೆಯಲ್ಲಿದ್ದುದನ್ನು ನೋಡಿದ ನೆನಪಿದೆ. ಜರ ತಾರಿಯ ಮುಂಡಾಸು, ಕೊಯಮುತ್ತೂರು ವೇಷ್ಟಿ, ದೊಡ್ಡ ಹೊಟ್ಟೆ........"

"ನಿಲ್ಲು! ಯಾವಾಗಲೂ ಬೆವರುವವರೇ?"

"ಅವರ ಫೋಟೋದಲ್ಲಿ ಬೆವರಿಲ್ಲ."

"ಹಾಗಾದರೆ ನಾನೆಣಿಸಿದವರಲ್ಲ. ನೀನೀಗ ವರ್ಣಿಸಿದಂತಹ ವ್ಯಕ್ತಿಯೊಂದು ಮೊನ್ನೆ ಹಾದುಹೋಯಿತು. ಬೆವರಿನ ಮುದ್ದೆ, ಕಷ್ಟವಾಯಿತು.... ಹೋಗಲಿ, ಬಹುಶಃ ವಿದ್ರೂಕ್ ಅಂದರೆ ಮನೆಯ ಹೆಸರೋ ಏನೋ!"

"ಅಲ್ಲ, ಮನುಷ್ಯರದೇ!"

"ಸತ್ತುಹೋಗಲಿ, ಇರಬಹುದು. ಈಗ ಈ ರಾತ್ರೆ, ಕತ್ತಲೆಯಲ್ಲಿ, ಮಳೆಯಲ್ಲಿ, ವಿದ್ರೂಕ್ ವಿದ್ರೂಕ್ ಎಂದು ಕೇಳುತ್ತಾ ಹೋದರೆ ಉದ್ರೇಕಗೊಳ್ಳುವವರಿದ್ದಾರೆ. ಈಗ ಏನಾದರೂ ನಿನ್ನ ವ್ಯವಸ್ಥೆ ಮಾಡಬೇಕಷ್ಟೆ!"

"ದೇವಾ!" ಎನ್ನುತ್ತ ಲಕ್ಷ್ಮೀದೇವಿ ಯಾನೆ ಗೀಳಿಯು ನನ್ನ ಮೈಮೇಲೆ ಬಿದ್ದಳು. ನಾನು ಎರಡೂ ಕೈಗಳಿಂದ ಆ ಹತಭಾಗಿನಿಯನ್ನು ಗಟ್ಟಿಯಾಗಿ ಹಿಡಿದು, ಮೂರ್ಛೆಹೋಗಿರುವಳೋ ನೋಡಿದೆ. ನಿಟ್ಟುಸಿರು ಬಿಟ್ಟಳು— ರಸ್ತೆಯಲ್ಲಿ ಯಾರಾದರೂ ಅತ್ತಿತ್ತ ಹೋಗುವರೋ ನೋಡಿ, ಇಲ್ಲವೆಂದು ತಿಳಿದು "ಅಳಬೇಡ, ದೇವರಿದ್ದಾನೆ" ಎಂದೆ.

"ನೀವೆ ನನ್ನ ದೇವರು!" ಎಂದು ಹೇಳುತ್ತ ಗೀಳಿ 'ಗೋಳೋ' ಎಂದಳು.

“ನನ್ನ ಎದೆಯಲ್ಲಿ ಜೀವವಿದ್ದರೆ....ಎನ್ನುವಷ್ಟರಲ್ಲಿ ನನ್ನ ಮನೆಲಕ್ಷ್ಮಿಯು ನೆನಪಾಗಿ ‘ಅಪರಾತ್ರಿಯಲ್ಲಿ ಅಪರಿಚಿತ ಹೆಂಗುಸಾರನ್ನು ಕೊಂಡುಬಂದನೀತ’ ಎಂದು ಗಾಬರಿಪಡಬಹುದೆಂದು ಹೊಳೆದು, “ಗೀಳೀ, ನನ್ನದೊಂದು ಮಾತನ್ನು ನೀನು ಕೇಳುವಿಯಾ? ನಿನ್ನನ್ನು ಕೋದಂಡ ವಿಲಾಸಕ್ಕೊಯ್ದು ಬಿಡುವೆ ಎಷ್ಟು ಖರ್ಚಾದರೂ........”

ಗೀಳಿ ಪುನಹ ನನ್ನ ಎದೆಯ ಮೇಲೆ ಬಿದ್ದು, “ದೇವಾ, ನನ್ನ ಪ್ರಾಣ ದಾತೃವೇ................ನಿಮ್ಮನ್ನು ಬಿಟ್ಟು ನಾನು ಇರಲಾರೆ. ನನ್ನನ್ನು ಸಾರ್ವಜನಿಕ ಹೊಟೇಲುಗಳಿಗೊಯ್ಯಬೇಡಿ!” ಎನ್ನುತ್ತ ಪುನಃ ಅತ್ತಳು.

ಅಷ್ಟರಲ್ಲಿ ಮೂರು ವ್ಯಕ್ತಿಗಳು ರಸ್ತೆಯ ಕೊನೆಯಲ್ಲಿ ನಡೆದುಬರುವಂತೆ ಕಂಡಿತು. “ಗೀಳಿ! ಅಪವಾದ ದೊಡ್ಡದು. ದೂರ ಸರಿದು ನಿಲ್ಲು!” ಎಂದೆ. ಗೀಳಿಯು ಗಾಬರಿಗೊಂಡು ದೂರ ಸರಿದಳು. ಮೂರೂ ವ್ಯಕ್ತಿಗಳು ನನ್ನ ಕಡೆಗೆ ನಡೆದುಬಂದುವು. ನನ್ನನ್ನೇ ಒಂದು ನಿಮಿಷ ನೋಡಿ ಮುಂದೆ ಸರಿದುವು. ದೂರ ಸರಿದು, ಒಂದು ಮನೆ ಜಗಲಿಯ ಕಂಭದ ಮರವೆಯಲ್ಲಿ ನಿಂತ ಗೀಳಿಯನ್ನು ಕರೆದೆ; ಉತ್ತರವಿಲ್ಲ. ಗಾಬರಿಯಿಂದ ಆ ಹತಭಾಗಿನಿಯು ಉತ್ತರ ಕೊಡಲಾರಳು. ನಾನೇ ಮೆಲ್ಲನೆ ಮುಂದೆ ನಡೆದುಹೋದೆ. ಕಂಭವಿತ್ತು; ಗೀಳಿಯಿರಲಿಲ್ಲ. “ಗೀಳಿ ಗೀಳಿ” ಎಂದು ಮೊದಲು ಮೆಲ್ಲಗೂ, ಅನಂತರ ಸ್ವಲ್ಪ ಗಟ್ಟಿಯಾಗಿಯೂ ಕರೆದೆ. ಲಕ್ಷ್ಮಿದೇವಿ ಯಾನೆ ಗೀಳಿಯ ಉತ್ತರವಿಲ್ಲ. ನನ್ನೆದುರಿಗೆ ದೊರೆತ ಎಲ್ಲ ಮನೆ ಮುಂದೆ ನಿಂತು “ಗೀಳಿ ಗೀಳಿ” ಎಂದೆ, ಉತ್ತರವಿಲ್ಲ. ಒಂದು ಮನೆಯಿಂದ “ಈ ನಡುರಾತ್ರೆ ಯಾರಿವ, ಗೀಳಿಯಂತೆ!” ಎಂದರು.

ಗೀಳಿಯೇನಾದಳೋ ಎಂದು ಬೇಸರದಿಂದ ಮನೆಗೆ ಹೋದೆ. ಹೋಗಿ ಕೋಟನ್ನು ತೆಗೆದಿಡುವಾಗ, ಸರಪಣಿಯಿದ್ದ ವಾಚೂ, ಒಳಗಿದ್ದ ಪಾಕೆಟೂ ಕಾಣೆಯಾಗಿದ್ದುವು. ಶ್ರೀಮಂತ ಕುಲದಲ್ಲಿ ಹುಟ್ಟಿ, ಎಲ್ಲರೂ ಸತ್ತು, ಮಂದಾಕಿನಿಯ ಆರೈಕೆಯಲ್ಲಿ ಬೆಳೆದು, ಮನ್ಮಥನಿಂದ ವಂಚಿಸಲ್ಪಟ್ಟು, ಸೌಖ್ಯದಲ್ಲಿ ಬಾಣಂತಿಯಾಗಿ, ಮಗುವನ್ನು ಗೋಲಕ್ ಎಂಬ ಹೆಂಗುಸಿಗೊಪ್ಪಿಸಿ, ತನ್ನ ತಂದೆಯ ಹಳೆ ಸ್ನೇಹಿತ ಜರತಾರಿ ಮುಂಡಾಸಿನ ವಿದ್ರೂಕ್

ರಾಯರನ್ನು ಹುಡುಕಿ ಬಂದ ಗೀಳಿಯು ನನ್ನಲ್ಲಿ ತನ್ನ ದೇವರನ್ನು ಕಂಡು, ಭಕ್ತಿಯಿಂದ ದೇವರ ವಾಚನ್ನೂ ಪಾಕೇಟನ್ನೂ ಪ್ರಸಾದರೂಪವಾಗಿ ಒಯ್ದಿದ್ದಳು.

ಮರುದಿನ ನನ್ನ ಗೃಹಲಕ್ಷ್ಮಿಯು "ವಾಚೇನಾಯಿತು?" ಎಂದು ಕೇಳಿದಾಗ "ಗೀಳಿಯಾಯಿತು" ಎಂದೆ. 'ಗೀಳಿ' ಎಂದರೇನೆಂದು ಪುನಃ ಕೇಳಿದರೆ ನಾನು 'ಗಾಳಿ' ಎಂದೇನೆಂಬ ಭಯದಿಂದ ಆಕೆ ಉಸಿರೆತ್ತಲಿಲ್ಲವೆಂದು ತೋರುತ್ತದೆ. ಗೀಳಿಯನ್ನೀಗ ಹುಡುಕುತ್ತಿದ್ದೇನೆ,—ಆಕೆಯೆಲ್ಲಾದರೂ ಎದುರಾದರೆ, ಅಲ್ಲಿಂದೋಡಬೇಕೆಂದು!

---

## ೪. ಬಹುಭಾಷಾ ವಿಶಾರದ

ಕೀಣು ಚಲೋ ಹಿಂದಿ ಮಾತಾಡಬಲ್ಲನೆಂಬುದರಲ್ಲೇನೂ ಆಶ್ಚರ್ಯವಿಲ್ಲ; ಲುಧಿಯಾನಾದಲ್ಲಿ ಮೂರು ವರ್ಷ ಇದ್ದನೆಂದು ಹೇಳುವರು. ಆವನು ಈ ಕಡೆ ಬಂದ ನಂತರವೇ ಲುಧಿಯಾನಾ ಸಿಲ್ಕುಗಳ ಜಾಹೀರಾತುಗಳೂ ಈ ಕಡೆ ಬಂದುವೆಂದೂ ಆ ಮೊದಲು ಅಲ್ಲಿಯವರಿಗೆ ನಮ್ಮ ಜಿಲ್ಲೆಯೊಂದಿದೆ ಮತ್ತು ಇಲ್ಲಿ ಬಹು ಜಾಣರಿರುವರೆಂಬುದು ತಿಳಿದಿರಲಿಲ್ಲವೆಂದೂ ಹೇಳಲಾಗಿದೆ. ಅವನು ಹಿಂದಿ ಮಾತಾಡುವುದನ್ನು ಕಂಡು ನನಗೂ ಆಸೆ.

"ಒಂದೇ ತಿಂಗಳಲ್ಲಿ ಹಿಂದಿ"—ಎಂದೊಬ್ಬರು ಚಿಕ್ಕ ಪುಸ್ತಕ ಬರೆದಿರುವರು. ಇವರು ಬರೆದುದನ್ನು ನೋಡಿ ಮತ್ತೊಬ್ಬರು "ಮೂರೇ ವಾರದಲ್ಲಿ" ಎಂದು ಮತ್ತೊಂದು ಬರೆದರಂತೆ. ಅನಂತರ "ಎರಡೇ ವಾರದಲ್ಲಿ........" ನಾಲ್ಕನೆಯದಾಗಿ "ಒಂದೇ ವಾರದಲ್ಲಿ........" ಹೀಗೆ ಪುಸ್ತಕಗಳಾದುವು. ಇಷ್ಟೆಲ್ಲವೂ ಸ್ಪರ್ಧೆಯಿಂದಲೇ ನಡೆದು ಹೋಯಿತು. ಮತ್ತೆ,—

೫ನೆಯದಾಗಿ "ಒಂದೇ ದಿನದಲ್ಲಿ ಹಿಂದಿ."

೬ನೆಯದಾಗಿ "ಒಂದೇ ಘಂಟೆಯಲ್ಲಿ ಹಿಂದಿ."

೭ನೆಯದಾಗಿ "ಒಂದೇ ನಿಮಿಷದಲ್ಲಿ ಹಿಂದಿ."

೮ನೆಯದಾಗಿ "ನೋಡಿದ ಮಾತ್ರಕ್ಕೆ ಹಿಂದಿ."

—ಎಂಬೀ ಮಹಾ ಗ್ರಂಥಗಳು ಹೊರಟು ಟೆಕ್ಸ್ಟಬುಕ್ ಕಮಿಟಿಗೆ

ಹೋಗದೆ (ಹೋದರೆ ಆ ಕಮಿಟಿಗೆ ಹೊಸ ಬೆಳಕು ಬೇಕಾಗಬಹುದು.) ಲೇಖಕನಿಂದ ನೇರಾಗಿ ಛಾಪಖಾನೆಗೂ ಅಲ್ಲಿಂದ ನೇರಾಗಿ ಪುಸ್ತಕ ವ್ಯಾಪಾರಿಯಲ್ಲಿಗೂ, ಅಲ್ಲಿಂದ ಜನರಿಗೂ ಹೋಗಿ, ಯಾರಿಗೆ ಯಾವ ಪುಸ್ತಕವನ್ನು ಕೊಂಡುಕೊಳ್ಳಬೇಕೆಂದು ತಿಳಿಯದ ಗೊಂದಲದಲ್ಲಿ ಹಿಂದಿಯು ಬಾರದಿರುವ ಕಷ್ಟವಿರಬಹುದು. (ಇದೆಲ್ಲ ಹರಟೆ.)

ನಾನು ಮೇಲಿನ ನಾಲ್ಕೂ ಪುಸ್ತಕಗಳನ್ನು ಕೊಂಡುಕೊಂಡೆ. ತಿಂಗಳಿಂದಾರಂಭವಾಗಿ ಒಂದು ವಾರದಲ್ಲಿ ಮುಗಿವಂತೆ ಹಣದಲ್ಲೂ ಪುಸ್ತಕದ ಅವಧಿಯಂತೆ ನಾಲ್ಕಾಣೆಯಿಂದಾರಂಭವಾಗಿ ಒಂದಾಣೆ ವರೆಗೆ ಬೆಲೆ. ಒಟ್ಟು ಹತ್ತಾಣೆಗೆ ನಾಲ್ಕು ಪುಸ್ತಕಗಳನ್ನು ಕೊಂಡುಕೊಂಡು ಮೊದಲನೆಯದನ್ನು ಒಂದು ತಿಂಗಳೂ, ಎರಡನೆಯದನ್ನು ಮೂರು ವಾರವೂ, ಕೊನೆಯದನ್ನು ಒಂದೇ ವಾರವೂ ಓದಿದೆ. ಕೊನೆಗೆ "ತಾವು ಸೌಖ್ಯವಾಗಿರುವಿರಷ್ಟೆ! ಕೆಮ್ಮು ಹೇಗಿದೆ? ಆ ನಂಟಸ್ಥಿಕೆಯ ವಿಚಾರ ಮತ್ತೆ ಏನಾಯಿತು?" ಇಷ್ಟಾದರೂ ಪ್ರಶ್ನಿಸುವಷ್ಟು ಉತ್ತರ ಬಂದರೆ ಅರ್ಥ ಮಾಡಿಕೊಳ್ಳುವಷ್ಟು ಹಿಂದಿ ಬಂತೆಂದು ಧೈರ್ಯವಾಯಿತು.

ಆಯಿತಷ್ಟೆ! ಇತ್ತೀಚೆಗೆ ಒಂದು ತಿಂಗಳ ಹಿಂದೆ ನಾನೂ ಕೀಣೂ ತ್ರಿಪುರಿಗೆ ಹೋಗಿದ್ದೆವು. ಒಂದು ದಿನ ಜಬ್ಬಲ್ಪುರದಲ್ಲಿ ಒಂದು ರಸ್ತೆಯಲ್ಲಿ ಇಬ್ಬರೇ ಬರುತಿದ್ದೆವು. ಆ ತನಕ ನನ್ನ ಅಭ್ಯಾಸವೆಲ್ಲ ಕೊಠಡಿಯೊಳಗೇ ಇತ್ತು. ಹಿಂದಿನಿಂದೊಬ್ಬನು ಓಡಿಬಂದನು. ಕೋಪ ಬಂದಂತೆ ಒದರುತಿದ್ದನು. ಅದು ಹಿಂದಿಯಾಗಿದ್ದಿರಬೇಕು.

"ಕೀಣು! ಪ್ರಸಂಗವು ಚಿಕ್ಕದಲ್ಲ; ಮನುಷ್ಯನಿಗೆ ಕೋಪ ಬಂದಿದೆ. ನಾನೇ ಸುಧಾರಿಸುವೆನು" ಎನ್ನುತ್ತಾ ಕೀಣುವನ್ನು ಹಿಂದೆ ತಳ್ಳಿದೆ. ನನಗೂ ಓಡಿ ಬಂದಾತನಿಗೂ ಒಳ್ಳೇ ಸಂಭಾಷಣೆಯಾಯಿತು. ಮೊದಲನೇ ಸಂಭಾಷಣೆಯು ಸುಲಭವಾಗಿರಲಿಲ್ಲ. ನಾನಾಡುವ ಪ್ರತಿ ಶಬ್ದವನ್ನು ಚೆನ್ನಾಗಿ ತೂಕ ಮಾಡಿಯೇ ಬಿಸುಡಬೇಕಾಗಿತ್ತು.

ನಮ್ಮ ಹೋಟಲಿಗೆ ಬಂದಾಗ, ನನ್ನ ಸಂಭಾಷಣೆಯು ಹೇಗಾಯಿತೆಂದು ಕೀಣುವಿನೊಡನೆ ಕೇಳಿದೆ.

"ನಿಜವಾಗಿ ನೀನು ತಿಳಿಯಬಯಸುವಿಯಷ್ಟೆ?" ಎಂದು ಕೀಣು ಕೇಳಿದನು.

"ಅವಶ್ಯವಾಗಿ" ಎಂದೆ.

"ಸರಿ. ನೋಡು, ನೀನಾಡಿದುದನ್ನೆಲ್ಲ ನಾನು ಒಂದು ಕಾಗದದಲ್ಲಿ ಕನ್ನಡದಲ್ಲಿ ಬರೆದಿಡುತ್ತೇನೆ. ನಿನಗೆ ಚೆನ್ನಾಗಿ ತಿಳಿಯುವುದು."

**ಒಬ್ಬ ಗಾಡಿವಾಲನೊಡನೆ ನನ್ನ ಸಂಭಾಷಣೆ.**

ಗಾಡಿವಾಲ:—ಬಾಬೂಜಿಗಳೇ ತಾವು ಎಲ್ಲಿಗೆ ಹೊರಟಿರಿ?

ನಾನು:—ತಮ್ಮ ಅಪೇಕ್ಷೆಯೇನು?

ಗಾಡಿವಾಲ:—ತಾವು ಪೇಟೆಗೆ ಹೋಗುವಿರಾ?

ನಾನು:—ನಿನಗೆ ದೇವರು ಒಳ್ಳೆಯದನ್ನೇ ಮಾಡಲಿ.

ಗಾಡಿವಾಲ:—ತಮಗೆ ಸಹ! ತಾವು ಪೇಟೆಗೆ ಹೋಗೋದೆ?

ನಾನು:—ನಾವೇಕೆ ನಿನ್ನ ಸ್ಥಳವನ್ನು ಹಾದು ಹೋಗಬಾರದು?

ಗಾಡಿವಾಲ:—ಇಲ್ಲ, ಇಲ್ಲ, ನಿಮಗೆ ಗಾಡಿ ಬೇಕೇ? ನನ್ನದು ಇಲ್ಲೇ ಸಮೀಪದಲ್ಲಿದೆ. ಕೆಲವೇ ಆಣೆಗಳಿಗೆ ಕೊಂಡುಹೋಗಬಹುದು.

ನಾನು:—ನಿಜ, ನಾವು ಪೇಟೆಯಿಂದ ಬಂದೆವು. ನಿನ್ನ ಬೆಳೆ ಹಾಳು ಮಾಡುವುದಿಲ್ಲ. ಆಣೆ ಹಾಕಿ ಹೇಳಬಹುದು.

ಗಾಡಿವಾಲ:—ಬಾಬೂಜಿ, ತಮಗೆ ಅರ್ಥವಾಗುವುದಿಲ್ಲ. ನಾನು ತಮಗೆ ಗಾಡಿ ಕೊಡಬಲ್ಲೆನೆಂದು ಹೇಳಿದೆ.

ನಾನು:—ಶಕ್ತಿಯ ಮಾತಿಲ್ಲ. ನಿನ್ನ ಬೆಳೆಗೂ ಹಾನಿಯಿಲ್ಲ. ಮಳೆ ಬರುವುದೆಂದು ನಿನ್ನ ಅಭಿಮತವೇ?

ಗಾಡಿವಾಲ:—ನೀವನ್ನುವುದೇನಂತೆ? ದೇವರಿಚ್ಛಿಸಿದರೆ ಮಳೆ ಬಂದೀತು.

ನಾನು:—ನೀನರಿಯೆಯಾ? ಇಲ್ಲೆಲ್ಲಿದೆ ಬೆಳೆ? ನಾಲ್ಕು ಗಿಡಗಳನ್ನು ನಾವು ತುಳಿಯುವುದಿಲ್ಲ.

ಗಾಡಿವಾಲ:—ನನ್ನೊಂದಿಗೆ ಬನ್ನಿ; ನಾನನ್ನುವುದೇನೆಂದು ತಮಗೆ ತೋರಿಸುತ್ತೇನೆ.

ನಾನು:—ನಿನಗೆರಡು ನಮಸ್ಕಾರ. ನನಗೆ ಹೆಚ್ಚು ಹೊತ್ತಿಲ್ಲ.

ಗಾಡಿವಾಲ:—ಅಲ್ಲ ಅಲ್ಲ, ಆ ದಾರಿಯಲ್ಲ. ಈ ದಾರಿಯಾಗಿ ಬಂದರೆ ನನ್ನ ಗಾಡಿ ಇಲ್ಲೇ ಇದೆ.

ನಾನು:—ಇಲ್ಲ, ನಾವು ಈ ದಾರಿಯಾಗಿ ಹೋಗಲು ಇಚ್ಛಿಸುತ್ತೇವೆ. ನಿನಗೆ ದೇವರು ಕಾಪಾಡಲಿ.

ಗಾಡಿವಾಲ:—ನಿಮಗೂ!....ಇತ್ತ ಬನ್ನಿ ಬಾಬೂಜಿ!

ನಾನು:—ಇಲ್ಲ, ನಿನ್ನ ಗಿಡಗಳು ನಮಗೆ ಬೇಕಾಗಿಲ್ಲ ಒಳ್ಳೇ ಜಾಗ್ರತೆಯಿಂದ ಹೆಜ್ಜೆ ಇಡುವೆವು.

ಗಾಡಿವಾಲ:—ಇದೇನು ನೀವು ಏನೇನು ಹೇಳುತ್ತಿರುವಿರಿ? ನನಗೆ ಗಿಡ ಇಲ್ಲ. ಗಾಡಿ ಇದೆ.

ನಾನು:—ಚಿಂತೆಯಿಲ್ಲ; ನಿನಗೆ ನಾನು ಕೃತಜ್ಞನು.

ಗಾಡಿವಾಲ:—ನೀವು ಒದರುತ್ತಿರುವುದನ್ನು ತಿಳಿವುದು ಅಸಾಧ್ಯ. ನೀವು ಎಲ್ಲಿಯವರೋ!

ನಾನು:—ಸ್ವಲ್ಪ ಕಷ್ಟವಿದೆ ನಿಜ. ಆದರೆ ತೋಟವು ಚಲೋದಹುದು.

ಗಾಡಿವಾಲ:—ನಿಮಗೆ ಥೇಟು ಹುಚ್ಚು ಎಂದು ನನ್ನ ಭಾವನೆ.

ನಾನು:—ನಿನಗೆ ಹಲವು ಗಂಡು ಮಕ್ಕಳು ಹುಟ್ಟಲಿ. ನಮಸ್ಕಾರ.

ಗಾಡಿವಾಲ:—ನಿನಗೂ ಸಹ! ನಿನಗೆ ಹುಟ್ಟುವ ಆ ಮಕ್ಕಳನ್ನು ದೇವರೇ ಕಾಪಾಡಲಿ! ಏಕೆಂದರೆ ನಿನ್ನ ತಲೆಗೆ ಬಲವೇನೂ ಇಲ್ಲ.

ನಾನು:—ನೀನು ಬಹು ದಯಾಳು. ನಿನಗೆ ವಂದನೆ. ನಿನ್ನ ಗಿಡಗಳನ್ನು ಮುಟ್ಟಲಾರೆವು. ನಿನಗೆ ಸಕಲ ಸೌಭಾಗ್ಯಗಳು ಲಭಿಸಲಿ!

ಗಾಡಿವಾಲ:—'ಗಿಡ' ಮತ್ತು 'ವಂದನೆ' ಎನ್ನುವ ನಿನಗೆ ಸಹ ಶಾಶ್ವತ ಶಾಂತಿ ಒದಗಲಿ! ನೀನು ನಮ್ಮ ದುರ್ಭಾಗ್ಯದಿಂದ ಇತ್ತ ಬಂದು, ನನ್ನ ತಲೆಯನ್ನು ಇಷ್ಟು ಹಾಳು ಮಾಡಿದಂತೆ ಕಾಣುತ್ತದೆ.

ವಿ. ಸೂ:—ಮತ್ತೆ ಕೆಲವು ಮಾತುಗಳು ಅಸ್ಪಷ್ಟವಾಗಿದ್ದುವೆಂದೂ, ಇನ್ನೂ ಕೆಲವು ಇಲ್ಲಿ ಹೇಳಲಾರದಷ್ಟು ಭಯಂಕರವಾಗಿದ್ದುವೆಂದೂ ಕೀಣು ಷರಾ ಬರೆದಿದ್ದಾನೆ.

## ೫. ಮೃತ್ಯು ನಿರೀಕ್ಷೆ

ವಿಶ್ವನಾಥನಿಗೆ 'ವೈರಾಗ್ಯ!'—ಜೀವನವೇ ಬೇಡವೆನಿಸಿತ್ತು. ಅಂದು ಆತನು ಭೀಷ್ಮನ ಕಥೆಯನ್ನು ನೆನಪಿಗೆ ತಂದುಕೊಂಡಿದ್ದನು. ತಾನೂ 'ಇಚ್ಛಾಮರಣಿ'ಯಾಗುವುದು ಸಾಧ್ಯವಿಲ್ಲವೇ? ಎಂದೆಣಿಸಿದನು. ನೋಡ ಲಾರನೇಕೆ?........ಸರಿ, ಜಗಲಿಯ ಮೇಲೆ ಒಂದು ಆರಾಮ ಕುರ್ಚಿಯಲ್ಲಿ ಬಿದ್ದುಕೊಂಡು, ಕಣ್ಣುಗಳನ್ನು ಮುಚ್ಚಿ, ಮೃತ್ಯುದೇವತೆಯ ಆಗಮನವನ್ನು ಬಯಸುತ್ತ ನಿರೀಕ್ಷೆಯಲ್ಲಿರತೊಡಗಿದನು.

ಪೂರ್ವದ ನೆನಹು,—ಅದು ಒಂದೊಂದಾಗಿ ಬರತೊಡಗಿತು. ಚಿಕ್ಕಂದಿನಲ್ಲಿ ಕೊಂದ ಇರುವೆಗಳು....ಸುಮಾರು ಮೂರು ಲಕ್ಷಕ್ಕೆ ಕಡಿಮೆ ಇಲ್ಲ. ಐದು ಹಲ್ಲಿಗಳು;—ಮುಟ್ಟಿದಾಗಲೇ ಬಾಲ ಕಡಿದುಹೋಗಿ ಕಳವಳಿಸಿದ್ದುವು. ಒಂದು ಬೆಕ್ಕಿನ ಮರಿಯನ್ನು ಮಹಡಿಯಿಂದ ಕೆಳಗೆ ಬಿಸುಡಿದುದು;...............ಬಾಲ್ಯದ ಪಾಪದ ರಾಶಿ. ಮುಂದೆ—ಆ ರಾಜಿ— ಆಕೆಯ ಮೇಲಿನ ಮೋಹದ ದೃಷ್ಟಿ! (ಆಕೆಯ ಮುನಿಸೂ ಇದೆ; ಆದರೆ, ಅದು ವಿಶ್ವನಾಥನ ಪಾಪದ 'ಕೆಟಲಾಗ'ನಲ್ಲಿ ಸೇರಿಲ್ಲ.)—ಜೂಜು!— ಪರವಿತ್ತಾಪಹರಣ. ಇರಲಿರಲಿ; ಎಷ್ಟನ್ನು ನೆನೆಯುವುದು? ತಲೆಯೇ ಕರಡಾಗುತ್ತಿದೆ. ಎಲ್ಲವೂ ಪಾಪ; ರಾಶಿ ರಾಶಿ ಪಾಪ!

ಇರುವೆಗಳನ್ನಾಗಲೀ ಹಲ್ಲಿಗಳನ್ನಾಗಲೀ ಕೊಂದ ದುಃಖ ಆತನಿಗಿಲ್ಲ. ಸುಳ್ಳು ಹೇಳಿದ, ಹಣ ಅಪಹರಿಸಿದ ದುಃಖವೂ ಇಲ್ಲ. ಈಗ, ಆತನ ಹಣವೆಲ್ಲ ಜೂಜಿನಿಂದ ನಿರ್ನಾಮವಾಗಿದೆ. ಮುಂದೆ ಸಿಗರೇಟು ಸೇವನೆಯೆಲ್ಲಿಂದ? ಅದೀಗ ದುಃಖ. ಅದಕ್ಕಾಗಿ ವೈರಾಗ್ಯ; ಅದು ಕಾರಣವೇ ಮೃತ್ಯು ನಿರೀಕ್ಷೆ.

ಆತ್ಮಹತ್ಯೆಯನ್ನಾತನು ಮಾಡಿಕೊಳ್ಳಲಾರನು. ಅದು ಪಾಪವೆಂದಲ್ಲ. ಭಯ, ಕೇವಲ ಭಯ. ಜೀವ ಮಾತ್ರ ಬೇಡವಾಗಿದೆ. ಅದು ತಾನಾಗಿಯೇ ಹೊರಟುಹೋಗದೇ ಎಂದು ಚಿಂತಿಸುತ್ತಿದ್ದಾನೆ. ಕಣ್ಣುಮುಚ್ಚಿ, "ಬಾ ಮರಣ, ಬಾ ಮರಣ, ಬಾ ನಮ್ಮ ಮನೆಗೆ!" ಎಂದು ರಾಗಬದ್ಧವಾಗಿ ಹಾಡಿದರೆ ಮರಣ ಬಾರದೇ? ಅವನಿಗೆ ಈಗ ಜೀವವೇ ಬೇಡ;

ಅದನ್ನು ದೇವರು ಇನ್ನೂ ಈ ದೇಹಪಂಜರದಲ್ಲಿರಿಸುವುದಕ್ಕೆ ದೇವರಿಗೇನು ಅಧಿಕಾರ?

"ಅದನ್ನು ಕೊಡುವ ಅಧಿಕಾರವಾತನಿಗೆ ಇದ್ದರೆ, ಕೊಂಡುಹೋಗಲೂ ಇದೆ!" ಎಂದು ವಿಶ್ವನಾಥನ ಅಂತರ್ವಾಣಿ.

"ಏನು? ಜೀವವನ್ನು ಕೊಡುವ ಅಧಿಕಾರವು ದೇವರಿಗೆ? ನಾವು ಕೇಳದೆ ಆತನು ನಮಗೇಕೆ ಜೀವ ಕೊಟ್ಟನು?" ಎಂದು ಕೋಪದಿಂದ ಪ್ರಶ್ನಿಸಿದನು ವಿಶ್ವನಾಥ.

ಅಂತರ್ವಾಣಿಯು ಪರಿಹಾಸ್ಯದಿಂದ ನಗುತ್ತ ಹೇಳಿತು: "ಮೂರ್ಖ, ನಾವು—ನಮಗೆ ಎಂದರೆ ಯಾರು? ನಾವು ಎನ್ನುತ್ತಿರುವುದು ಜೀವವಲ್ಲವೆ? ದೇಹವು ಕೇವಲ ಮಣ್ಣು. ಆ ಮಣ್ಣಿನ ಗೂಡಿನೊಳಗೆ, ನೀನೀಗ ನಾವು ಎನ್ನುತ್ತಿರುವ ಪ್ರಾಣಪಕ್ಷಿಯನ್ನು ದೇವರು ತಳ್ಳಿದನು!"

"ಹಾಗಾದರೆ, ನನಗೀಗ ಹೊರಗೆ ಬರಬೇಕಾಗಿದೆ. ಆ ದೇವರು ಅಡ್ಡಿ ಮಾಡುವುದೇಕೆ?" ಎಂದು ವಿಶ್ವನಾಥನ ಕರ್ಕಶ ಪ್ರಶ್ನೆ.

"ಅದು ನಿನ್ನ ಇಚ್ಛೆಯಲ್ಲ. ಅಧಿಕಾರದಿಂದಲೇ ನಿನ್ನನ್ನು ದೇಹ ಪಂಜರದೊಳಗಿಟ್ಟ ದೇವರು, ತಾನು ಇಚ್ಛಿಸಿದಾಗ ಮಾತ್ರ ಹೊರತೆಗೆಯು ವನು. ಅದರ ಮೇಲೆ ನಿನ್ನ ಅಧಿಕಾರವಿಲ್ಲ!"

"ಏನು, ನನ್ನ ಮೇಲೆ ನನಗೇ ಅಧಿಕಾರವಿಲ್ಲವೇ?"

"ಇಲ್ಲ."

"ಆದರೆ, ಈ ದೇಹಪಂಜರದ ಮೇಲೆ ನನಗೆ ಅಧಿಕಾರವಿದೆ!"

"ಇಲ್ಲ."

"ಛೀ ಮೂರ್ಖ, ಈ ದೇಹಪಂಜರದ ಮೇಲೂ ನನಗಧಿಕಾರವಿಲ್ಲ? ಒಂದು ಚೂರಿಯಿಂದ ನಾನು ನನ್ನ ಕೈಬೆರಳನ್ನು ಕಡಿದುಕೊಳ್ಳಬಲ್ಲೆ!" ಎಂದು ಗರ್ಜಿಸಿದನು ವಿಶ್ವನಾಥ.

"ಇಲ್ಲ—ಅದೆಲ್ಲ ಸುಳ್ಳು. ನೋಡು, ಬೆರಳನ್ನು ಕೊಯ್ದರೆ ನಿನಗೇ—ಆತ್ಮನಿಗೇ—ವೇದನೆಯಾಗುವುದು. ವೇದನೆಯೆಂಬುದು ಏನು—ಬೆರಳು ಕಡಿಯಬಾರದಿತ್ತು ಎಂಬ ಅಭಿಪ್ರಾಯವನ್ನು ಜೀವನು ತನಗೇ ಹೇಳಿ ಕೊಳ್ಳುವನು. ಆ ಉತ್ತರಕ್ಕೆ ಅರ್ಥವೇನು?—ಹೇ ಮುಠ್ಠಾಳ, ಬೆರಳನ್ನು

ಕಡಿದರೂ ನೋವಾಗದಿದ್ದರೆ, ಆಗ ಮಾತ್ರ ದೇಹಪಂಜರದ ಮೇಲೆ ನಿನಗೆ ಅಧಿಕಾರ" ಎಂದುತ್ತರವಿತ್ತಿತು ಅಶರೀರವಾಣಿ.

"ನಾನು ಎರಡು ದಿನ ಆಹಾರ ಸ್ವೀಕಾರಮಾಡದೆ ಇರಬಲ್ಲೆ!"

"ಹಹ್ಹಹ್ಹ!"—ನಕ್ಕಿತು ಅಶರೀರವಾಣಿ. "ಎರಡು ದಿನ........ಇರಬಹುದು. ಆದರೆ, ಹೇ ಹುಲುಮಾನವ, ಆ ಎರಡು ದಿನಗಳಲ್ಲಿ ನಿನ್ನ ಶರೀರವು ಎಷ್ಟು ಜೀರ್ಣವಾಗುವುದು! ನಿನಗೆಷ್ಟು ದುಃಖವುಂಟಾಗುವುದು! ಆಹಾರವನ್ನು ನೆನೆನೆನೆದು ಎಷ್ಟು ಕಳವಳಿಸುವೆ! ಮತ್ತು,........ಅಹುದು, ಮತ್ತು...........ಆ ಶರೀರವು ಕ್ಷೀಣವಾಗುವುದನ್ನು ತಡೆಯಲು ನಿನ್ನಿಂದ ಸಾಧ್ಯವಿದೆಯೇ? ಆಹಾರ ಕೊಡಬಾರದು, ಶರೀರವು ಕೃಶವಾಗಬಾರದು,—ಹಾಗೆ ಮಾಡಲು ಸಾಧ್ಯವಿದೆಯೇ? ವೇದನೆಯಾಗಬಾರದು, ಹಸಿವಾಗಬಾರದು, ಅನ್ನಕ್ಕಾಗಿ ಆತುರಪಡಬಾರದು,—ಅದೆಲ್ಲ ಸಾಧ್ಯವಿದೆಯೇ? ನಾನು ನಂಬುವುದಿಲ್ಲ. ಇಂತಹ ನಿನಗೆ ಆ ದೇಹದ ಮೇಲೆ ಅಧಿಕಾರ ಪೆತ್ತಣದು?"

ವಿಶ್ವನಾಥನು ಕೋಪದಿಂದ ನುಡಿದನು: "ಹಾಗಾದರೆ, ನನಗೆ ನನ್ನ ಮೇಲೆ ಅಧಿಕಾರವಿಲ್ಲವೇ? ನನ್ನ ದೇಹದ ಮೇಲೆಯೂ ಇಲ್ಲವೇ?"

"ಇಲ್ಲ."

"ಏಕೆ?"

"ನೋಡು—ದೇಹಪಂಜರಕ್ಕೆ ಬರುವಾಗ ನಿನ್ನ ಇಚ್ಛೆ ಇರಲಿಲ್ಲ. ಹೋಗುವುದೂ ನಿನ್ನ ಅಧೀನವಲ್ಲ. ಹಾಗೆಯೇ ದೇಹಪಂಜರವನ್ನು ಮಾನವನು ಸೃಷ್ಟಿಸಿಲ್ಲ; ಅದುಕಾರಣವೇ ಅದನ್ನು ನಾಶಮಾಡಲೂ ಆರೆ."

"ಮತ್ತಾರು ಇದಕ್ಕೆಲ್ಲ ಒಡೆಯರು?"

"ಪರಮಾತ್ಮನು ಮತ್ತು ಪ್ರಕೃತಿ."

"ಪ್ರಕೃತಿ ಯಾರು?"

"ಯಾರನ್ನು ಪರಮಾತ್ಮನು ಕೂಡ ಉಲ್ಲಂಘಿಸಲಾರನೋ ಅದು. ಯಾವುದು ಸತ್ಯವೋ ಅದು."

"ಮಾನವರು ಉಲ್ಲಂಘಿಸಲಾರರೇ?"

"ಅಸಾಧ್ಯ. ಉಲ್ಲಂಘಿಸಲು ಯತ್ನಿಸುವವರನ್ನು ಅದು ವಿಧೇಯನನ್ನಾಗಿ ಕೂಡಲೇ ಮಾಡುವುದು."

"ಹಾಗಾದರೆ, ಜನನ ಮರಣಗಳೆಂದರೇನು? ಅದು ಯಾರಿಂದ?"

"ಪ್ರಕೃತಿಯಿಂದಲೇ ಜನನ; ಮರಣವೂ ಅದರಿಂದ."

"ಮರಣವನ್ನು ತರುವಂತಹುದು ಸತ್ಯವಾಗಬಲ್ಲುದೆ?"

"ಜನನವೆಂಬ ಸ್ಥಿತಿಯನ್ನುಂಟುಮಾಡಿದ ಪ್ರಕೃತಿಯೇ ತನ್ನನ್ನು ಉಲ್ಲಂಘಿಸಿದಾಗ 'ಮರಣ'ವೆಂಬ ಪರಿವರ್ತನ ಸ್ಥಿತಿಯಿಂದ ಮಾನವನನ್ನು ತಿದ್ದುವಳು."

"ಜನನವೆಲ್ಲಿದೆ?"

"ಪ್ರಕೃತಿಯ ನಗುವಿನಲ್ಲಿ."

"ಮರಣ?"

"ಪ್ರಕೃತಿಯ ಮುನಿಸಿನಲ್ಲಿ."

"ಮೃತ್ಯುದೇವತೆಯೆನ್ನುವರಲ್ಲ. ಆಕೆಯಿರುವುದು ನಿಜವಾಗಿ ಪ್ರಕೃತಿಯ ಮುನಿಸಿನಲ್ಲೆ?"

"ಸಂದೇಹವೆ ನಿನಗೆ?" — — —

— — —ಜಗಲಿಯಲ್ಲಿ, ವಿಶ್ವನಾಥನ ಬೆನ್ನಹಿಂದೆ ಕೈಬಳೆಗಳ ಶಬ್ದವಾಯಿತು. ವಿಶ್ವನಾಥನು ಅಶರೀರವಾಣಿಯನ್ನಲ್ಲೆ ತೊರೆದು, "ಯಾರು?" ಎಂದನು.

"ನಾನು, ರಾಜಿ!"

"ರಾಜಿ?--ಪರಾಂಗನೆ!"

ರಾಜಿಯು ಅವಾಕ್ಕಾದಳು. ವಿಶ್ವನಾಥನು ಆಕೆಯನ್ನು ದುಷ್ಟದೃಷ್ಟಿಯಿಂದ ನೋಡಿ, ಈಗ, ಕಡುದುಷ್ಟ ದೃಷ್ಟಿಯಿಂದ "ಪರಾಂಗನೆ!" ಎನ್ನುತ್ತಿರುವನು!

ಸ್ವಾಭಿಮಾನವು ಘಕ್ಕನೆ ಉಜ್ವಲಿಸಿ, ರಾಜಿಯು "ಪರಾಂಗನೆಯಾಗಲಿ ದೇವಾಂಗನೆಯಾಗಲಿ,—ನನ್ನ ಸ್ಥಾನವನ್ನು ಚರ್ಚಿಸಲು ನಾನು ಬಂದಿಲ್ಲ. ನಿಮ್ಮ ಸಿಗರೇಟು ಪೆಟ್ಟಿಗೆಯನ್ನು ನನ್ನ ಕೊಠಡಿಯ ಹೊರಗೆ ನೋಡಿದೆ. ಪರವಿತ್ತವು ನಮ್ಮಲ್ಲಿರಬಾರದೆಂದೇ ಇದನ್ನು ತಂದೆನು!" ಎಂದಳು.

ನಾಚಿಕೆ, ರೋಷ, ಆಕೆಯಲ್ಲಿ. ನಾಚಿಕೆಯು ನಿಜವಾದುದು; ರೋಷ ಮಾತ್ರ.... ಹುಸಿಯೋ ಹಸಿಯೋ!

ಆಕೆಯ ಸ್ವರದಿಂದ ಚಕಿತನಾಗಿ ವಿಶ್ವನಾಥನು, "ರಾಜಿ, ಕೋಪಿಸ ಬೇಡ. ನಾನು ಒಂದು ಗೂಢ ವ್ಯಕ್ತಿಯೊಡನೆ ಅತಿ ಮಹತ್ವದ ಸಂಭಾಷಣೆ ಯಲ್ಲಿದ್ದೆ....ಮೃತ್ಯುವಿನ ವಿಷಯವಾಗಿ ಪ್ರಶ್ನಿಸುತ್ತಿದ್ದೆ" ಎಂದನು.

"ಮೃತ್ಯು?"

"ಹೌದು. ಮೃತ್ಯು ಯಾರು, ಎಲ್ಲಿರುವನು, ಹೇಗೆ ಬರುವನು? ಎಂದು ಪ್ರಶ್ನಿಸುತ್ತಿದ್ದೆ."

"ನಿಮ್ಮ ಸಿಗರೇಟು ಪೆಟ್ಟಿಗೆ" ಎನ್ನುತ್ತ ರಾಜಿ, ಸಿಗರೇಟು ಪೆಟ್ಟಿಗೆ ಯನ್ನು ವಿಶ್ವನಾಥನ ಕೈಗೆ ಕೊಟ್ಟಳು.

ಆತುರದಿಂದ, "ಕೊಡು, ಕೊಡು!" ಎನ್ನುತ್ತ, ಆ ಪೆಟ್ಟಿಗೆಯನ್ನು ಸೆಳೆದು, ವಿಶ್ವನಾಥನು, ಒಂದು ಸಿಗರೇಟನ್ನು ಬಾಯಿಗಿಟ್ಟು, ಬೆಂಕಿಕಡ್ಡಿ ಯನ್ನು ಗೀಚಿ ಹತ್ತಿಸಿ, ಹೊಗೆಯೂದಿದನು.

ಸಿಗರೇಟಿನಿಂದ ಮೃತ್ಯುದೇವತೆ ಹೊರಹೊರಟು ವಾತಾವರಣವನ್ನೆಲ್ಲ ತುಂಬಿ, ಮರೆಯಾಗಿ ನಿಂತಿತು.

"ಮೃತ್ಯುದೇವತೆಯೋ ಜನನ ದೇವತೆಯೋ?" ಎನ್ನುತ್ತ ವಿಶ್ವ ನಾಥನ ಉತ್ತೇಜಿತ ಮುಖಭಾವವನ್ನು ಕಂಡು, ಆಸೆ ಚಿಗುರಿ, ರಾಜಿ ಪ್ರಶ್ನಿಸಿ, ಕಿಲಕಿಲನೆ ನಕ್ಕಳು.

ಆಕೆಯ ತುಟಿಗಳ ಮೇಲಿಂದಲೂ ಯಾವುದೋ ಒಂದು ದೇವ ತೆಯು ಹೊರಟು, ವಿಶ್ವನಾಥನ ಹೃದಯ ಗುಹ್ವರವನ್ನು ಪ್ರವೇಶಿಸಿ ಕುಳಿತಿತು.

ವಿಶ್ವನಾಥನು, ವಿದ್ಯುತ್ಪ್ರವಾಹವು ದೇಹದೊಳಗೆ ಸಂಚರಿಸಿದಂತಾಗಿ, ಜಗ್ಗನೆ ಎದ್ದುನಿಂತು, ರಾಜಿಯ ಕೈಯನ್ನು ಹಿಡಿದು, "ರಾಜಿ, ಮೃತ್ಯು ಇಲ್ಲ........ನೀನಿದ್ದಲ್ಲಿ ಇಲ್ಲ!" ಎಂದು ಅಬ್ಬರದಿಂದ ನುಡಿದನು.

× × × × ×

ಒಂದು ಕ್ಷಣದ ತನಕ ವಿಶ್ವನಾಥನು ರಾಜಿಯ ಕಣ್ಣುಗಳನ್ನೇ ನೋಡಿ, ಅವು ಇಷ್ಟು ಸುಂದರವಾಗಿ ಹೇಗೆ ರಚಿಸಲ್ಪಟ್ಟವೆಂದು ಆಶ್ಚರ್ಯಪಟ್ಟು,

ಮಂಕನಾಗಿ (ಅಥವಾ "ಪ್ರೇಮವನ್ನು ಕುಡಿದು") ಕೊನೆಗೆ—"ರಾಜಿ" ಎಂದನು.

ರಾಜಿಯು 'ಪ್ರಶ್ನಾರ್ಥಕ'ವಾಗಿ ಕಣ್ಣುಗಳನ್ನೆತ್ತಿದಳು.

"ರಾಜಿ! ಹೃದಯಕೋಶವೆಂಬುದಿದೆಯಲ್ಲಾ, ಅದು ನಮ್ಮ ಕೈಮುಷ್ಟಿಗಿಂತ ದೊಡ್ಡದಿಲ್ಲ ರಾಜಿ! ಆದರೂ ಅದರೊಳಗೆ ಭಾರೀ ಯುದ್ಧಗಳು ನಡೆಯುತ್ತವೆ!"

"ಪಾಪ!"

"ಪಾಪವೋ ಪುಣ್ಯವೊ! ಆದರೆ, ಯುದ್ಧಗಳು ಅಲ್ಲಿ ಲೆಕ್ಕವಿಲ್ಲದಷ್ಟು ನಡೆದೇ ಇವೆ. ಅಲ್ಲಿ ಶಸ್ತ್ರಸನ್ಯಾಸ ಪರಿಷತ್ತು ಎಂಬುದೇ ಇಲ್ಲ! ಶಸ್ತ್ರ ಸನ್ಯಾಸವೆಂದರೆ ನಿನಗೆ ಗೊತ್ತೇ?"

"ಸನ್ಯಾಸಿಯು ಸೋಗಿನಲ್ಲಿ ಶಸ್ತ್ರಹಿಡಿದು ತಿರುಗುವುದು!"

"ಅಹುದು, ಸನ್ಯಾಸಿಗಳು ಯೋಗದಂಡವನ್ನು ಹಿಡಿದು, ದೇವರನ್ನು ಸೆರೆಹಿಡಿಯಲು ಹುಡುಕುವರಲ್ಲಾ,—ಹಾಗೆಯೇ ಶಸ್ತ್ರಗಳನ್ನು ಹಿಡಿದು ಶಾಂತಿಯನ್ನು ಹುಡುಕುವುದಕ್ಕೆ ಶಸ್ತ್ರ ಸನ್ಯಾಸವೆನ್ನುತ್ತಾರೆ. ಅದು ಹೋಗಲಿ, ನನ್ನಲ್ಲಿ ಫಕ್ಕನೆ 'ಫಿಲಾಸಫಿ' ಉಂಟಾಯಿತು. 'ಫಿಲಾಸಫಿ' ಎಂದರೆ ಗೊತ್ತೇ?"

"ಮೊನ್ನೆ ಮುಂಡಪ್ಪನಿಗೆ ತಲೆಯಲ್ಲುಂಟಾಯಿತಂತಲ್ಲಾ, ಅದೇ!"

"ಅಲ್ಲ, ಮುಂಡಪ್ಪನಿಗಾದುದು 'ಮೆನಿಂಜೈಟಿಸ್.' ಫಿಲಾಸಫಿ ಎಂದರೆ ಮೆನಿಂಜೈಟಿಸಿಗಿಂತ ಅದು ಮೇಲ್ತರಗತಿಯದು. ನಾವು ತತ್ವಜ್ಞಾನವೆನ್ನುತ್ತೇವಲ್ಲಾ,—ಅದು! ತತ್ವಜ್ಞಾನ ಎಲ್ಲಿ ಹುಟ್ಟುತ್ತದೆ ಗೊತ್ತೇ?"

"ಇಝ್ಝಿಚೆಯರಿನಲ್ಲಿ!"

"ರೈಟ್!-ಹಿಂದಿನಿಂದ ಅಥವಾ ಮುಂದಿನಿಂದ ಮಾತ್ರ ನೀನಿರಬೇಕು!"

---

## ೬. ಪಾತಿ ಮತ್ತು ಅವಳ ಮೋತಿ

ಪ್ರೇಮವು ಪಕ್ಷವಾತದಂತೆ ಫಕ್ಕನೆ ಬಂದು ಸಾಯುವ ತನಕ ಅಲ್ಲೇ ಇರುವುದೆಂದು ಕಾದಂಬರೀಕಾರರು ಹೇಳಿರುವರು. ಹಾಗೆ ಬಂದ ಕೂಡಲೇ ಯಾವುದೋ ಒಂದೆರಡು ಅಂಗಗಳು ನಿರ್ಜೀವವಾಗಿ ಹೋಗುವುವು; ನಾಲಗೆಗೆ ರುಚಿಯಿಲ್ಲ;ಆಕಸ್ಮಿಕವಾಗಿ ಮೈ ಬೆವರುವುದು;ಸಾಯಾಹ್ನ ತೆಳ್ಳನೆ ಜ್ವರ; ನಡುರಾತ್ರಿ ದುಸ್ವಪ್ನ; ಮುಂಜಾನೆ ಮಹಡಿಯಿಂದ ಕೆಳಗೆ ಬಿದ್ದಂತೆ ಭಾಸವಾಗಿ ಫಕ್ಕನೆ ಎಚ್ಚರ. ಇದು ಪಕ್ಷವಾತಜಾತಿಯ ಪ್ರೇಮದ ಲಕ್ಷಣಗಳು.

ವಿಷಮಜ್ವರದಂತೆ ಬರುವ ಪ್ರೇಮವು ಎರಡನೆ ತರಗತಿಯದು. ಇದು ಬಂದು, ಬೆಳೆದು, ಕರಗಿಸುವುದು. ಮನುಷ್ಯನು ಉಳಿವ ಆಸೆ ೧೦; ಸಾಯುವ ಗಾಬರಿ ೯೦.

ಹಾಗೆಯೇ ಫೈಲೆರಿಯಾ,ಎನೇಮಿಯಾ,ಇನ್ಸೋಮ್ನಿಯಾ ಮೊದಲಾದ ಜಾತಿಯ ಪ್ರೇಮಗಳನ್ನೂ ಇಂಗ್ಲಿಷ್ ಕಾದಂಬರಿಗಳಲ್ಲಿ ವಿವರಿಸಲಾಗಿದೆ. ಇಂತಹ ಒಂದೊಂದು ಜಾತಿಯ ಪ್ರೇಮವು ತಗಲಿದವನೂ ಒಂದು ಪಕ್ಷ, ಒಂದು ತಿಂಗಳು, ಒಂದು ಋತು ಅಥವಾ ಒಂದು ವರುಷದೊಳಗೆ ಮರಣಪಟ್ಟ ದಾಖಲೆಗಳೂ ಇವೆ.

ಪ್ರೇಮದ ನೂರಾರು ಜಾತಿಗಳಲ್ಲಿ ಮಲೇರಿಯಾ ಜಾತಿಯ ಪ್ರೇಮವು ಅತಿ ಕೀಳ್ತರಗತಿಯದ್ದೆಂದು ಕವಿಗಳನ್ನುವರು. ಈ ಪ್ರೇಮವು ಹೇಳದೆ ಕೇಳದೆ ಅತಿಥಿಯಂತೆ ಫಕ್ಕನೆ ಆಗಾಗ್ಗೆ ಬರುವುದು, ಹೋಗುವುದು.

ಜಾತಿಗಳು ಹಲವಿರಲಿ; ಜಾಣರು, ಪ್ರೇಮವನ್ನು ಇಂಗ್ಲಿಷ್ ಮತ್ತು ಹಿಂದೂಸ್ಥಾನೀ ಹೀಗೆ ಎರಡು ಭಾಗಗಳಾಗಿ ವಿಂಗಡಿಸಿರುವರು. ರೈಲ್ವೆ ಬಂಡಿಯೊಳಗೆ, ಬಸ್ಸಿನೊಳಗೆ, ಮೋಟಾರ್ ಅಪಘಡದಲ್ಲಿ, ಅಂಗಡಿಯ ಮುಂದೆ ಚೊಕಲೇಟು ಪಡಕೊಳ್ಳುವಾಗ....ಪ್ರೇಮವುಂಟಾದರೆ, ಅದು ಇಂಗ್ಲಿಷ್ ಜಾತಿಯ ಪ್ರೇಮ. ವಿವಾಹವಾದ ಎರಡು ವರ್ಷಗಳ ತನಕ ಗಂಡನ ಮುಖ ನೋಡದೆ, ಅದರನಂತರ ಒತ್ತಾಯದಿಂದ ನೋಡಿ, ಒಪ್ಪಿ, ಹದಿಬದೆಯ ಧರ್ಮ ನೆನಪಿಗೆ ಬಂದು ಸಂಸಾರ ಸಾಗಿಸಿಕೊಂಡಿದ್ದಾಗ ಉಂಟಾಗುವ ಪ್ರೇಮವು ಹಿಂದುಸ್ಥಾನೀ ಪ್ರೇಮ. ಇವೆರಡೂ ಜಾತಿಯ ಪ್ರೇಮ

ಗಳಲ್ಲಿ ಒಳ್ಳೆ ತರಗತಿ ಯಾವುದೆಂದು ಈ ತನಕ ನಿಶ್ಚಿತಾಭಿಪ್ರಾಯವಿಲ್ಲ. ಇಂಗ್ಲಿಷ್ ತರಗತಿ ಒಳ್ಳೆಯದೆನ್ನುವವರಿದ್ದಾರೆ; ಹಿಂದೂಸ್ಥಾನೀ ಪದ್ಧತಿ ಆಗಬಹುದೆನ್ನುವವರೂ ಇದ್ದಾರೆ. ಎರಡೂ ಬೆರೆತರೆ ಅದೊಂದು ಜಾತಿಯೇ ಬೇರೆ—ಉತ್ತಮ—ಎನ್ನುವವರೂ ಇದ್ದಾರೆ. ಅಂತೂ, ಆದಮನು ಸೇಬುಹಣ್ಣು ತಿಂದು ಗಲಭೆ ಎಬ್ಬಿಸಿದಂದಿನಿಂದ ಈ ತನಕ ಈ ವಿವಾದವು ಇತ್ಯರ್ಥವಾಗಿಲ್ಲ.

"ನೀನು ಯಾವ ಜಾತಿಯ ಪ್ರೇಮವನ್ನು ಮೆಚ್ಚುತ್ತಿ?"—ಎಂದು, ಕೀಣು(ನನ್ನ ಗೆಳೆಯ) ಒಂದು ದಿನ ಆಕಸ್ಮಿಕವಾಗಿ ಪ್ರಶ್ನಿಸಿದ.

ನಾನು ಸಿದ್ಧನಾಗಿರಲಿಲ್ಲ. ಫಕ್ಕನೆ ಮೈ ತೆಗೆದು, "ನಾನು.... ಇನ್ನೂ ಇತ್ಯರ್ಥವಾಗಿಲ್ಲ. ಪ್ರಪಂಚವು ಈ ವಿಷಯದ ಮೇಲೆ ಚೆನ್ನಾಗಿ ಹೊಡೆದಾಡಿಕೊಂಡು, ಒಂದು ಇತ್ಯರ್ಥಕ್ಕೆ ಬಂದ ಅನಂತರ ಹೇಳಿದರೆ ಆಗದೇ?" ಎಂದು ಕೇಳಿದೆ.

"ಉತ್ತರಕ್ಕೆ ಕಾಯುವುದಾದರೆ ನೀನು ಭೂಲೋಕವಿರುವಷ್ಟು ಕಾಲ ಕಾಯಬೇಕಾಗುವುದು" ಎಂದ.

"ಹಾಗಾದರೆ........ಹೇಳಲೇ?—ನನಗೆ ಹಿಂದೂಸ್ಥಾನಿ ಜಾತಿಯೇ ಒಪ್ಪುತ್ತದೆ."

"ನೀನು ಮೂರ್ಖ. ಇಂಗ್ಲಿಷ್ ಪ್ರೇಮಕ್ಕಿಂತ ದೊಡ್ಡ ಪ್ರೇಮವೇ ಭೂಲೋಕದಲ್ಲಿಲ್ಲ." ಎಂದ.

"ಹೇಗೆ?"—ಕೇಳಿದೆ.

ಕೇಳಿಂದ ಕೀಣು:

"ಇಂಗ್ಲಿಷರಲ್ಲಿ, ತರುಣಿಯ ಟುವಾಲು, ಕೈತಪ್ಪಿ ಕೆಳಗೆ ಬೀಳುತ್ತದೆ; ತರುಣನು ಹೆಕ್ಕಿ ಆಕೆಗೆ ಕೊಡುತ್ತ, 'ಕ್ಷಮಿಸು. ನಿನ್ನ ಟುವಾಲು' ಎನ್ನುತ್ತಾನೆ. ಹುಡುಗಿಗೆ ಆಗಲೇ ಅಲ್ಲೇ ಪ್ರೇಮೋದಯವಾಗಿ, ಇಬ್ಬರೂ ಧನ್ಯರಾಗುತ್ತಾರೆ. ವರಾನ್ವೇಷಣದ ಕಷ್ಟಗಳೇ ಇಲ್ಲ. ಹಿಂದೂಸ್ಥಾನಿ ಹುಡುಗಿಯ ಟುವಾಲು ಬಿದ್ದರೆ ತರುಣನು ಹೆಕ್ಕುವುದಿಲ್ಲ; ಹೆಕ್ಕಿದರೂ ಕೊಡುವುದಿಲ್ಲ; ಕೊಟ್ಟರೂ, ತಘರಾಕು ವಿನಾ ಪ್ರೇಮ ಸಿಗುವುದಿಲ್ಲ. ಇದು ಒಂದು ಉದಾಹರಣೆ."

"ಮುಂದೆ?"

"ಇಂಗ್ಲಿಷ್ ತರುಣನೂ ತರುಣಿಯೂ ಕಾಲೇಜಿಗೆ ಹೋಗುತ್ತಿರುವರು. ಪರೀಕ್ಷೆ ಸಮೀಪಿಸಿದೆ. ಆ ತನಕ ಚೊಕಲೇಟು ತಿಂದುಕೊಂಡಿದ್ದ ಮಿಸ್ ವರ್ಜಿನಿಯಳು ಪಾಠ ಕಲಿತುದೇ ಇಲ್ಲ. ಪರೀಕ್ಷೆ ದಿನ ಸಮೀಪಿಸಿದಾಗ ಶಾಲಾ ಗೆಳೆಯ ಮಾಸ್ಟರ್ ಜೋನ್ಸನೊಡನೆ ಹೋಗಿ ಲೆಕ್ಕ ಕಲಿಸು ಎನ್ನುತ್ತಾಳೆ. ಜೋನ್ಸನು ಕಲಿಸುತ್ತಾನೆ. ತರುಣಿಗೆ ಪುಸ್ತಕದಲ್ಲಿನ ಲೆಕ್ಕಕ್ಕೆ ಉತ್ತರ ಸಿಗುವಾಗಲೇ ಹೃದಯದೊಳಗಿನ ಲೆಕ್ಕಕ್ಕೂ ಉತ್ತರ ದೊರೆಯುತ್ತದೆ. ಶಾಲಾ ಪರೀಕ್ಷೆಯಲ್ಲೂ ತೇರ್ಗಡೆಯಾಗುತ್ತಾಳೆ. ಹಿಂದೂಸ್ಥಾನಿ ಹುಡುಗಿಯು ಹುಡುಗನೊಡನೆ ಲೆಕ್ಕ ಕಲಿಯ ಹೋದರೆ ಊರಿಗೆ ಊರೇ ಲೆಕ್ಕಹಾಕುತ್ತದೆ; ಹುಡುಗಿಯು ಮತ್ತೆ ತೇರ್ಗಡೆಯಾಗುವುದೇ ಇಲ್ಲ."

"ಅದ್ಭುತ! ನನಗೆ ಆಶ್ಚರ್ಯವಾಗಿದೆ!" ಎಂದೆ.

"ನಿನಗೆ ಆಶ್ಚರ್ಯವಾಗಿದೆ. ನನಗೆ ತಲೆಯೇ ಕರಡು!"—ಎಂದ ಕೀಣು.

"ಈ ರೀತಿ ಮಾತಾಡುತ್ತಿರುವುದು ಅದಕ್ಕಾಗಿಯೆ?" ಎಂದು ಕೇಳಿದೆ.

"ವಿನೋದ ಬೇಡ. ಹೃದಯ ಹರಿದು ಹೋಗಿದೆ!" ಎಂದ.

"ಹೃದಯವೆಂದರೆ ಹರಕು ಬಟ್ಟೆಯೆಂದು ನನಗೆ ತಿಳಿದಿರಲಿಲ್ಲ!" ಎಂದೆ.

"ಬೆಕ್ಕಿಗೆ ಆಟ!" ಎಂದ.

"ನನ್ನ ಸ್ನೇಹಿತನು ಇಲಿಯೆಂದು ಈಗ ಫಕ್ಕನೆ ತಿಳಿದು ದಂಗುಬಡಿದಂತಾಗಿದೆ!" ಎಂದೆ.

"ಮರಣದ ಮನೆಯಲ್ಲಿ ಮದುವೆ ಮಾಡಬೇಡ," ಎಂದ ಕೀಣು; ಅವನ ಕಂಠದಲ್ಲಿ ಅತೀವ ದುಃಖದ ದನಿಯಿತ್ತು. ಕಣ್ಣುಗಳು ತಟಕೂ ನೀರಿಲ್ಲದೆ ಬೇಸಿಗೆ ಕಾಲದ ಕಡ್ಲೂರು ಜಿಲ್ಲೆಯೊಳಗಿನ ಕೆರೆಯಂತೆ ಕಾಣುತಿದ್ದುವು!

"ಯಾರು ಮರಣ ಪಟ್ಟರು?" ಎಂದು ಕೇಳಿದೆ.

"ಮೋತಿ, ಮತ್ತು ಪಾತಿ!"

"ಯಾವ ಮೋತಿ?"

"ಪಾತಿಯ ಪ್ರೀತಿಯ ಕೋತಿ!"

"ಯಾವ ಪಾತಿ?"

"ನನ್ನ ಜೀವನದ ಜ್ಯೋತಿ!"

"ಇದು ನಿಜವಾಗಿ ಸ್ವಲ್ಪ........ದುಃಖಕರ ಅಹುದು! ನಾನು ಹೇಗೆ ಕ್ಷಮೆ ಬೇಡಲಿ?"— ಕೇಳಿದೆ.

"ಬೇಡ: ನಾನು ನಿನ್ನನ್ನು ಕ್ಷಮಿಸಿರುವೆನು. ಪುರುಸೊತ್ತಿದೆಯೆ?"

"ಏಕೆ?"

"ನನ್ನ ಪ್ರೇಮ ಪ್ರಕರಣದ ವೃತ್ತಾಂತ ಹೇಳಬೇಕೆಂದಿದ್ದೇನೆ."

"ನೀನೂ ಪ್ರೇಮ ಮಾಡುವಿಯೆಂದು—ಅಥವಾ ಮಾಡಿರುವಿ ಎಂದು ನನಗೆ ತಿಳಿದಿರಲಿಲ್ಲ!"—ಎಂದೆ.

"ಪ್ರೇಮವು ಪಕ್ಷಿಗಳಿಗಿದೆ; ಮನುಷ್ಯರಿಗಿಲ್ಲವೆ? ಕ್ರಿಮಿ ಕೀಟಗಳಿಗೂ ಇದೆ—ಸರ್ವ ಶ್ರೇಷ್ಟ ಮಾನವರಿಗಿಲ್ಲವೆ? ಪ್ರೇಮ ಮಾಡದ ಮನುಷ್ಯನಾರಂತೆ? ಯಾರೂ ಇಲ್ಲ!" (ಒಂದು ನಿಟ್ಟುಸಿರು ಕೇಳಿತು. ಕಡ್ಲೂರು ಕೆರೆಯಲ್ಲಿ ನೀರಾಯಿತೇ ನೋಡಿದೆ. ಇಲ್ಲ.)

"ಕಥೆ ಹೇಳು!" ಎಂದೆ.

"ಕೇಳು!"—ಕೀಣು ಆರಂಭಿಸಿದ:

"ಜನವರಿ ತಿಂಗಳು. ಭಾರಿ ಚಳಿ. ನಾನು ಮೆಟ್ರಿಕ್ ಕಲಿಯುತಿದ್ದೆ. ನೆರೆಕರೆಯ ಪಾತಿಯೂ ಶಾಲೆಯಲ್ಲಿ ಫಿಫ್ತ್‌ಫಾರ್ಮ್ ಕಲಿಯುತಿದ್ದಳು. 'ಸಿಲೆಕ್ಷನ್' ಸಮೀಪಿಸಿತ್ತು. ನನ್ನ ಎದೆಯಲ್ಲೂ ಚಳಿಯಿತ್ತು. ಪರೀಕ್ಷೆ ದಿನ ನಾನು ತೋಟದಲ್ಲಿ ಪುಸ್ತಕ ಹಿಡಿದು ಅಡ್ಡಾಡುತ್ತಿರುವಾಗ ಸರಸರ ಶಬ್ದವಾಯಿತೇನೆಂದು ನೋಡಿದೆ. ಪಾತಿಯು ಅನತಿ ದೂರದಲ್ಲಿ—ಅವರ ತೋಟದಿಂದ—ಹಾದು ಹೋಗುತ್ತಿದ್ದಳು. ನನ್ನ ದೃಷ್ಟಿಯೂ ಅವಳದೂ ಒಂದಾದುವು. ಪಾತಿ ಮುಗುಳ್ನಗೆ ನಕ್ಕಳು. ನನಗೆ ಎದೆ ಧಸಕ್ಕೆಂದಿತು. ಕ್ಷಮಿಸು. ಗಣಿತದ ಬಲದಿಂದ ಹೇಳುತ್ತಿದ್ದೇನೆ. ಆಗಲೇ ನನ್ನ ಎದೆಯಲ್ಲಿ ಸೇಕಡಾ ೨೫ರಷ್ಟು ಪ್ರೇಮವು ಅಂಕುರಿಸಿದ್ದಿರಬೇಕು. ಅಂದು ಸಾಯಂಕಾಲ ಪುನಃ ತೋಟಕ್ಕೆ ಹೋದಾಗ, ಸಂಭ್ರಮನೇ ಮುಗುಳ್ನಗೆ ದೊರೆಯಿತು; ಪ್ರೇಮವು ಸೇಕಡಾ ೫೦ಕ್ಕೆ ಬೆಳೆಯಿತು. ಮರುದಿನ ಮುಂಜಾನೆ ಒಂದು ಚೊಕಲೇಟು ಪೆಟ್ಟಿಗೆಯನ್ನೂ ಒಂದು ತಾಂವು ಕಾಗದವನ್ನೂ ಆ ಕಡೆ ಬಿಸುಡಿದೆ—ಪಾತಿ ಹೆಕ್ಕಿದಳು—ಪ್ರೇಮವು ೭೫ಕ್ಕೆ ಹೆಚ್ಚಿತು. ಎರಡನೆ

ದಿನ ಸಾಯಂಕಾಲ ತೋಟದಲ್ಲಿ ತಿರುಗಾಡುವಾಗ ಥಟ್ಟೆಂದು ನನ್ನ ಮೈಗೆ ಚಿಕ್ಕ ಕಾಗದ ಪೊಟ್ಣ ಬಂದು ತಗಲಿತು. ಹೆಕ್ಕಿ ಓದಲು—"ವಂದನೆಗಳು. ನಿನ್ನ ಪಾತಿ" ಎಂದು ಇಂಗ್ಲಿಷಿನಲ್ಲಿ ಬರೆದಿತ್ತು. ಅಲ್ಲಿಗೆ ಪ್ರೇಮವು ನೂರಕ್ಕೆ ನೂರಾಯಿತು."

ಕೀಣು ಒಂದು ನಿಟ್ಟುಸಿರುಬಿಟ್ಟು, ಮುಂದುವರಿದನು: "ಅಂದಿನಿಂದ ನನ್ನಲ್ಲಿ ನೂರು ಡಿಗ್ರಿಗಳಿಗಿಂತ ಕಡಿಮೆ ಶಾಖ ಇರಲೇ ಇಲ್ಲ. ತೆಳ್ಳನೆ ಜ್ವರವು ಕ್ಷಯದ ಚಿಹ್ನವೆಂದು ನೀನು ಅನ್ನಬಹುದು. ನಿನಗೆ ಅನುಭವ ಸಾಲದು. ಆ ಜ್ವರಕ್ಕೆ ಪ್ರೇಮಜ್ವರವೆನ್ನುವರು....ಒಂದು ತಿಂಗಳೊಳಗೆ ಪಾತಿಗೆ ನಾನು, ಆ ಜ್ವರದ ಭರದಲ್ಲಿ ಬರೆದ ಪತ್ರಗಳು ಸುಮಾರು ೭೦೦; ಅವಳಿಂದ ಬಂದ ಉತ್ತರಗಳು ೬೦೦ಕ್ಕೆ ಕಡಿಮೆಯಿಲ್ಲ. ಪ್ರತಿಯೊಂದು ಪತ್ರದಲ್ಲಿ ನಿನ್ನ ಪ್ರೇಮದ ಪ್ರಿಮಿಯಮ್ ಬಾಕಿಯಿದೆ; ಆಗಾಗ್ಗೆ ಸಿಕ್ಕು ಎಂದೂ ಬರೆಯುತ್ತಿದ್ದೆ. ಯಾವ ಇನ್ಸೂರೆನ್ಸ್ ಕಂಪೆನಿಯೂ, ಪೊಲಿಸಿದಾರರಿಗೆ, ಪ್ರಿಮಿಯಮ್ ಬಾಕಿಗಾಗಿ, ಅಷ್ಟು ಅವಧಿಯೊಳಗೆ ಇಷ್ಟು ಪತ್ರಗಳನ್ನು ಬರೆಯುತ್ತಿರಲಿಲ್ಲ. ಇದರಿಂದ ನೀನು ತಿಳಕೊಳ್ಳಬೇಕು—ಪ್ರೇಮವು ನಿಜವಾಗಿ ವಿಮೆಗಿಂತ ದೊಡ್ಡದು!

"ಪ್ರೇಮವು ಉಕ್ಕಿ ಬಂದಂತೆ, ಪಾತಿಗೇನು ಕೊಡಲಿ—ಏನು ಕೊಡಲಿ ಎಂದು ಮನಸ್ಸು ಕಳವಳಗೊಂಡಿತು. ಇದ್ದ ಅಲ್ಪ ಸ್ವಲ್ಪ ಹಣದಿಂದ ಪಾತಿಗೆ ಚೊಕಲೇಟು—ರಿಬ್ಬನು—ಪೌಡರು—ಸ್ನೋ—ಸೇಫ್ಟಿಪಿನ್ನು—ಖಾಲಿ ಸಿಗರೇಟು ಪೆಟ್ಟಿಗೆ—ದರ್ಜಿ ವರ್ಜಿಸಿದ ವಸ್ತ್ರದ ಚೂರುಗಳು—ಸಾಬೂನು ಪೆಟ್ಟಿಗೆ (ಬರಿದಾದುದು)—ಸಿನೆಮಾ 'ಹೆರಾಲ್ಡ್'—ಮುಂತಾದ ಯಾವತ್ತೂ ಸಾಮಾನುಗಳನ್ನು ತಂದುಕೊಟ್ಟೆ. ಹುಡುಗಿಯರಿಗೆ ಪ್ರಪಂಚದಲ್ಲಿ ಇದಕ್ಕಿಂತ ಹೆಚ್ಚಿನದಾವುದೂ ಬೇಡ. ಅಷ್ಟು ಕೊಟ್ಟರೂ ಈ ಕೀಣುವಿನ ತಲೆಯು ಇನ್ನೂ ಕೊಡು—ಇನ್ನೂ ಕೊಡು ಎನ್ನುತಿತ್ತು. ಏನು ಕೊಡಲಿ? ಪ್ರೀತಿಯ ಪಾತಿಗೆ ಕೊಡುವಂಥದ್ದೆಲ್ಲ ಕೊಟ್ಟು ಮುಗಿಯಿತು. ಆಗ, ನನ್ನ ಸಹಾಯಕ್ಕೆ ಬಂತು ಪಾತಿಯ ಪ್ರೀತಿಯ ಕೋತಿ ಮೋತಿ! ಮೋತಿಗೆ ನಿತ್ಯವೂ ಬಾಳೆಹಣ್ಣು ತಂದು ಕೊಡಲಾರಂಭಿಸಿದೆ. ಗೆಳೆಯಾ—ನಾನು ಸಹ ತಿನ್ನದೆ ಬಾಳೆಹಣ್ಣನ್ನು ಮೋತಿಗೆ ಕೊಟ್ಟೆ. ನಿನಗೆ ಇಂಗ್ಲೀಷ್

ತರಗತಿಯ ಪ್ರೇಮವೆಂದರೇನೆಂದು ತಿಳಿದರೆ, ನೀನೂ ಹಾಗೆ ಮಾಡುತಿದ್ದೆ!

"ಮಾರ್ಚಿ ಬಂತು. ನೂರಕ್ಕೆ ನೂರು ಇದ್ದ ಪ್ರೇಮವು, ಬಡ್ಡಿ—ಮಾರ್ಬಡ್ಡಿಗಳಿಂದ ಬೆಳೆಯಿತು. ಈ ಪ್ರೇಮವೆಂಬ ಮೂಲಧನವು ಪರಿಮಿತಿಯಿಲ್ಲದ ಪತ್ರಗಳೆಂಬ ಪಠಾಣ್ ತರಗತಿಯ ಬಡ್ಡಿಯಿಂದ ಬೆಳೆದು ಹೃದಯವೆಂಬ ನನ್ನ ತಿಜೋರಿಯು ತುಂಬಿದ್ದಾಗ ಶಾಲಾ ಪರೀಕ್ಷೆಯೆಂಬ ಕಣ್ಕಟ್ಟು ನಾಟಕದಲ್ಲಿ ಕೀಣು ಎಂಬ ಈ ಕ್ರಿಮಿಯು ನಾಪಾಸಾಯಿತು! ನನ್ನನ್ನೆ ನಾನು ಕ್ರಿಮಿ ಎಂದುಕೊಂಡುದಕ್ಕೆ ನೀನು ಬೇಸರಿಸಬೇಡ. ಎಲ್ಲರೂ ಕ್ರಿಮಿಗಳು. ಪರಮಾತ್ಮನು ಮಾತ್ರ ದೊಡ್ಡವನು!

"ನಾನು 'ಫೈಲ್' ಆದುದಕ್ಕೆ ಪಾತಿ ಅತ್ತಳು. ನನ್ನ ಬಳಿಗೆ ಬಂದು, ಸಿನೆಮದಲ್ಲಿ ನಾಯಕಿಯು ನಾಯಕನ ಭುಜದ ಮೇಲೆ ತಲೆಯಿಟ್ಟು ಕೂಗುವಂತೆ ಕೂಗಿದಳೇ ಎಂದು ನೀನು ಪ್ರಶ್ನಿಸಬಹುದು. ಇಲ್ಲ. ಹಾಗಾದರೆ, ಅವಳು ಕಣ್ಣೀರಿಳಿಸಿದುದು ನನಗೆ ಹೇಗೆ ಗೊತ್ತಾಯಿತೆಂದು ಕೇಳುವಿ. ನನಗೆ ಅವಳಿಂದ ಬಂದ ಪತ್ರದ ಮೇಲೂ, ಬರಹದ ಶೈಲಿಯಲ್ಲಿಯೂ ಧಾರಾಳ ಕಣ್ಣೀರಿತ್ತು. ಅಳಬಾರದೆಂದು ನಾನು ಆಕೆಗೆ ನೂರಾರು ಪತ್ರಗಳನ್ನು ಬರೆದೆ. ಕೊನೆಗೆ ನನ್ನ ಮಹಾ ಯತ್ನದಿಂದ ಆಕೆ ಸತ್ಯಾಗ್ರಹ ನಿಲ್ಲಿಸಿದಳು. ನನ್ನ ತಲೆ ಮೇಲಿನ ಭಾರ ಕೆಳಗಿಳಿಸಿದಂತಾಯಿತು. ಗೆಳೆಯಾ! ಪಾತಿ ಅತ್ತರೆ ಕೀಣು ಬದುಕಿ ಏನು ಪ್ರಯೋಜನ?

"ಕಣ್ಣೀರು ನಿಲ್ಲಿಸಿದರೂ, ನಾನು ನಾಪಾಸಾದುದಕ್ಕೆ ದುಃಖಿಸಿರುವೆನೆಂದೆಣಿಸಿ ಪಾತಿಗೂ ದುಃಖವಾಗದೆ ಇರುವುದೇ? ನನ್ನನ್ನು ಹೇಗೆ ಸಮಾಧಾನಗೊಳಿಸಲೆಂದು ಪಾತಿಗೆ ಮಹಾ ಸಮಸ್ಯೆಯಾಯಿತು. ಆಗಲೇ, ಅವಳ ತಂದೆಗೆ ಕರ್ನೂಲಿಗೆ ವರ್ಗವಾಯಿತು ಅವಳ ತಂದೆ ಮುನ್ಸೀಫ—ನೆನಪಿರಲಿ. ಪಾತಿಯ ಆತ್ಮವು ಎಷ್ಟು ಕಳವಳಿಸಬೇಡ! ನನಗೆ ಪ್ರಾಣವಿತ್ತೆಂದು ನೀನು ಭಾವಿಸುವೆಯಾ? ಇಲ್ಲ—ನಿನಗೇನೂ ಅರಿಯದು. ಇಂಗ್ಲೀಷ್ ಮಾದರಿಯ ಪ್ರೇಮವು ಅಗಾಧವಾದುದು!"

ಕೀಣು ಮತ್ತೊಂದು ನಿಟ್ಟುಸಿರಿಟ್ಟು, ನನ್ನ ಕೋಣೆಯಲ್ಲಿ ತೂಗಹಾಕಿದ್ದ ಥೋಮ್ಸನ್ ಕಂಪೆನಿಯ ಕೆಲೆಂಡರಿನಲ್ಲಿದ್ದ ಸ್ಟೀಮರಿನ ಮೇಲೆ ನಿಂತು

ತನ್ನ ಪ್ರಾಣಪ್ರಿಯನನ್ನು ಪ್ರೇಮಪೂರಿತ ನಯನಗಳಿಂದ ದೃಷ್ಟಿಸುವ ಇಂಗ್ಲಿಷ್ ತರುಣಿಯನ್ನೆ ಒಂದು ನಿಮಿಷ ನೋಡುತ್ತ, ಫಕ್ಕನೆ ಕಣ್ಣನ್ನಿತ್ತ ಹೊರಳಿಸಿ ಮುಂದುವರಿಸಿದನು:

ಪಾತಿ ಕರ್ನೂಲಿಗೆ ಹೊರಟಳು. ಹೋಗುವಾಗ, ತನ್ನ ಪ್ರೀತಿಯ ಕೋತಿಯಾಗಿರುವ ನನ್ನನ್ನು ಅವಳ ಜೀವನದ ಜ್ಯೋತಿಯಾಗಿರುವ ಮೋತಿಗೆ ಕೊಟ್ಟಳು........!"

"................?"

"ತಪ್ಪಿದೆ. ಕ್ಷಮಿಸು! ಪಾತಿಯು ತನ್ನ ಪ್ರೀತಿಯ ಕೋತಿ ಮೋತಿಯನ್ನು ಅವಳ ಜೀವನದ ಜ್ಯೋತಿಯಾಗಿರುವ ನನಗೆ ಕೊಟ್ಟಳು. ಮತ್ತು, 'ಹೃದಯೇಶ್ವರಾ, ನನ್ನ ಮೋತಿಯನ್ನು ಕಾಯುವ ಭಾರ ನಿನ್ನದು. ಇವಳನ್ನು ನಿನ್ನ ಬಳಿಯಲ್ಲಿಟ್ಟುಕೊಂಡು, ನಾನೇ ಇರುವೆನೆಂದೆಣಿಸಿಕೊಂಡಿರು. ವಿಧಾತನು ಯಾವಾಗ ನನ್ನ ತಂದೆಯನ್ನು ನೀನಿರುವ ಊರಿಗೆ ತರುವನೋ ಆಗ ನಾನು ಬಂದು ನಿನ್ನನ್ನು ಭೇಟಿಯಾಗುವೆ. ನಿನ್ನವಳು!' ಎಂದು ಒಂದು ಪತ್ರವನ್ನು ಬರೆದು ಕೊಟ್ಟಳು. ಆದರೆ, ಹಾಯ್! ಮುನ್ಸೀಫರುಗಳ ವಿಧಾತನು, ಹೈಕೋರ್ಟೆಂಬ ವೈಕುಂಠದಲ್ಲಿ ಕುಳಿತಿರುವನು. ಅವನು, ನನ್ನ ಪ್ರೀತಿಯ ಪಾತಿಯ ಪಿತನನ್ನು ನಾನಿರುವ ಊರಿಗೆ ಕಳಿಸಲೇ ಇಲ್ಲ. ಕರ್ನೂಲಿನಿಂದ ಕಡಪಾ, ಕಡಪದಿಂದ ಕಡ್ಲೂರು, ಕಡ್ಲೂರಿನಿಂದ ಕಣ್ಣಾನೂರು—ಹೀಗೆ ವರ್ಗ ಮಾಡಿದನು. ಪಾತಿಯ ಪ್ರೇಮದಿಂದ ಒಂದು ವರ್ಷದ ತನಕ ಮೋತಿಗೆ ಬಾಳೆಹಣ್ಣು, ಬಿಸ್ಕೂಟು, ಚೊಕಲೇಟು – (ಅಹುದು ಚೊಕಲೇಟು! ಮೋತಿಯು, ನಾನು ಆಣೆಗೊಂದರಂತೆ ತಂದ ಚೊಕಲೇಟುಗಳನ್ನೂ ತಿನ್ನಲು ಕಲಿತು, ನನ್ನೆದೆ ತಣಿಸುತ್ತಿತ್ತು)—ಕೊಡಲಾರಂಭಿಸಿದೆ. ಒಂದು ವರ್ಷ ಮುಗಿಯಿತು. ನನ್ನೊಡನೆ ಇದ್ದ ಎಲ್ಲ ಹಣ ಮುಗಿದು ಸಾಲವಾಯಿತು. ಮೋತಿ ಬೆಳೆಯಿತು. ಪಾತಿ ಮಾತ್ರ ಬರಲಿಲ್ಲ!"

ಇಲ್ಲಿ ಮೂರನೇ ನಿಟ್ಟುಸಿರು--ಒಂದು ನಿಮಿಷದ ಮೌನ—ಪುನಃ ಥೋಮ್ಸನ್ ಕಂಪೆನಿಯ ಕೆಲೆಂಡರ್ ಕಡೆಗೆ ದೃಷ್ಟಿ—ಅನಂತರ ಫಕ್ಕನೆ ಈ ಕಡೆ ನೋಡಿ, ಮಾತು ಹೊರಡೋಣ:

"ನನ್ನ ಎದೆಯು ಆರಿ ಹೋಯಿತು. ತಟಕು ನೆತ್ತರಿಲ್ಲ. ಪಾತಿ

ಇಲ್ಲದ ಥಾತ್ರಿ ಏತಕ್ಕೆ ಮಿತ್ರಾ? ಮೋತಿಯಿತ್ತೆನ್ನುವಿ. ಆದರೆ, ಸಾಲ ಮಾಡಿ ಈ ಮೋತಿಗೆ ಆಣೆಗೊಂದರ ಚೊಕಲೇಟು ಕೊಟ್ಟರೂ ಪಾತಿ ಬರಲಿಲ್ಲ. ನನ್ನ ಈ ಹನುಮಂತನ ಭಜನೆ—ಆಂಜನೇಯನಿಗೆ ಈ ನೈವೇದ್ಯ ಏನು ಫಲ? ಸಾಲಗಾರರ ಪೀಡೆ ಹೆಚ್ಚಾಯಿತು. ಒಂದು ದಿನ ಒಬ್ಬ ಸಾಲಿಗನು ಬಂದು ನನ್ನನ್ನು ನಾಯಿ ಎಂದು ಸಂಬೋಧಿಸಿ, 'ಸಿಕ್ಕವರ ಕೋತಿಗಳಿಗೆ, ಪ್ರಿಯವಾದ (ಹೆಚ್ಚು ಕ್ರಯದ) ಚೊಕಲೇಟುಗಳನ್ನು ಸಾಲವಾಗಿ ತಿನ್ನಿಸಲು ಕೊಡಲಿಕ್ಕೆ ನಾವೂ ಕೋತಿಗಳಲ್ಲ. ನಮಗೆ ಮನೆಯಲ್ಲಿ ಮಕ್ಕಳುಮರಿ ಗಳಿವೆ. ಈ ದಿನ ಸಾಯಂಕಾಲದೊಳಗೆ ನನ್ನ ಹಣ ಕೊಡದಿದ್ದರೆ, ವ್ಯಾಜ್ಯ ಮಾಡುವ ಮುಂಚೆಯೇ ಜಪ್ತಿ ಮಾಡುತ್ತೇನೆ' ಎಂದು ತಣ್ಣಗೆ ನುಡಿದು ಹೋದನು. ಆಕಸ್ಮಿಕವಾಗಿ ನನ್ನ ತಲೆ ಕೆಟ್ಟಿತು. ಮೋತಿ ಅಲ್ಲೇ ಕೂತಿತ್ತು. ಕೋಪದಿಂದ ಆ ಹನುಮನನ್ನೆತ್ತುತ್ತ ಬಲವಾಗಿ ನೆಲಕ್ಕೆ ಒಗೆದು, **"ಮೋತಿ ನಿಧನ ಪೂರ್ವಾಹ್ನ—೯-೪೫—ಶವಸಂಸ್ಕಾರ—ನಿಮ್ಮ ತೋಟ—ನಾನು ಸಾಲ—ವ್ಯಾಜ್ಯದ ಮೊದಲು ಜಪ್ತಿ—ಸರ್ವನಾಶ--ತಂತಿಯಿಂದ ನೂರು ರವಾನಿಸು'** ಎಂದು ಪಾತಿಗೆ ತಂತಿ ಬಿಟ್ಟೆ!"

ನಾಲ್ಕನೆ ನಿಟ್ಟುಸಿರು ಬಿಟ್ಟು, ಥೋಮ್ಸನ್ ಕಂಪೆನಿ ಕೆಲೆಂಡರಿಗೆ ಮೂರನೆ ನೋಟ ಬಿಟ್ಟು, ಕೀಣು ಮುಂದರಿದನು:

"ಮೂರು ದಿನ ಕಾದರೂ ಪಾತಿಯ ಮಾತಿಲ್ಲ. ಅಂಗಡಿಯವನು ಬಂದು ಅಂಗಿಯನ್ನು ಕೂಡ ಒಯ್ದನು. ನಾಲ್ಕನೆ ದಿನ ಪತ್ರ ಬಂತು—ಪ್ರಿಯಳದ್ದಲ್ಲ—ಅವಳ ಪಿತನದು. **"ಹುಚ್ಚು ಹುಚ್ಚು ತಂತಿ ಬಿಟ್ಟರೆ ತಕ್ಕ ಕ್ರಮ ತೆಗೆದುಕೊಳ್ಳಲಾಗುವುದು ಎಚ್ಚರಿಕೆ!"** ಎಂದು ಅದರಲ್ಲಿ ಎಂಟೇ ಶಬ್ದಗಳಿದ್ದುವು. ಎದೆಯೊಡೆಯಿತು. ಪ್ರೀತಿಯ ಪಾತಿಗೆ ಬಿಟ್ಟ ತಂತಿಯು ಅವಳ ತಂದೆಗೆ ತಗಲಿತ್ತು. ದುರ್ದೈವ!........ಚಿಂತೆಯಿರಲಿಲ್ಲ. ಆದರೆ, ಗೆಳೆಯಾ! ಹೇಳಲೇ? ಮೂರ್ಛೆ ಹೋಗೋದಿಲ್ಲವೆಂದು ಭಾಷೆ ಕೊಡು!........ಸರಿ, ಐದನೇ ದಿನ ಪತ್ರಿಕೆ ತೆಗೆದು ನೋಡುತ್ತೇನೆ—'....**ಮುನ್ಸೀಫ್, ಕಡಪಾ, ಇವರ ಏಕಮಾತ್ರ ಕುವರಿ ಪಾರ್ವತಿ** ಎಂಬ **ಶೋಡಷ ವಯಸ್ಕ ಕನ್ನಿಕೆಯು ನ್ಯುಮೋನಿಯದಿಂದ ಕಾಲವಾದಳೆಂದು........'** ಇತ್ಯಾದಿ! ಮಿತ್ರಾ! ನಾನು ಹೇಗೆ ಬಾಳಲಿ?"

—ಎನ್ನುವಾಗ, ಕಡಪಾ ಕೆರೆ ತುಂಬಿತು. ಕೀಣುವಿನ ಕಣ್ಣುಗಳೂ ತುಂಬಿಕೊಂಡುವು. ಕಣ್ಣು ರೆಪ್ಪೆಗಳನ್ನು ಮೂರು ನಾಲ್ಕು ಬಾರಿ ಮುಚ್ಚಿ—ತೆರೆದು ಕೀಣುವು ತುಂಬಿದ ಕಣ್ಣೀರನ್ನು ಒತ್ತುತ್ತ ಒಳಗೆ ಬಿಟ್ಟು, ಥೋಮ್ಸನ್ ಸ್ಟೀಮರ್ ದಂಪತಿಗಳನ್ನು ನಾಲ್ಕನೇ ಬಾರಿ ದೃಷ್ಟಿಸಿ ಎಂದನು:

"ಗೆಳೆಯಾ, ಪಾತಿಯು ಮರಣಪಟ್ಟುದು ನ್ಯುಮೋನಿಯದಿಂದ ಎಂದು ಸರ್ವಥಾ ಎಣಿಸಬೇಡ. ತನ್ನ ಪ್ರೀತಿಯ ಮೋತಿಯ ಮರಣ ವಾರ್ತೆಯನ್ನು ಕೇಳಿ ಉಂಟಾದ 'ಶೊಕ್' ಅದು! ಮತ್ತು, ಮೋತಿ ಸತ್ತರೆ ತನ್ನ ಜೀವನದ ಜ್ಯೋತಿಯಾದ ನಾನೂ ಉಳಿಯಲಾರೆನೆಂದು ಆಕೆಗನ್ನಿಸಿತೋ ಏನೊ! ನನ್ನ ಕಷ್ಟ ಅರಿತು ನೊಂದಳೋ ಏನೊ ಆ ಬಾಲೆ!........ ಮಿತ್ರಾ, ನಾನೆಂಥ ಪಾಪಿ! ಎಂಥ ನಿರ್ದಯನು! ಮೋತಿಯನ್ನೂ, ತನ್ಮೂಲಕ ಪಾತಿಯನ್ನೂ ಕೊಂದೆನು! ಮಿತ್ರಾ, ನೆನೆದರೆ ಜೀವನವೇ ಬೇಡವೆನಿಸುತ್ತದೆ. ಆದರೆ, ಆತ್ಮಹತ್ಯ ಮಾಡಿಕೊಳ್ಳಲಾರೆ. ಮೋತಿ ಮತ್ತು ಪಾತಿಯನ್ನು ಬಹಳ ವರ್ಷಗಳ ವರೆಗೆ ಆಗಾಗ್ಗೆ ನೆನೆದು ಪಾಪ ಪರಿಹಾರ ಮಾಡಿಕೊಂಡು, ಅನಂತರ ಸಾಯಬೇಕೆಂದಿದ್ದೇನೆ. ಆಗ ಮಾತ್ರ, ನನ್ನನ್ನು ಕಾಯುತ್ತ ಪಾತಿಯು ಸ್ವರ್ಗದಲ್ಲಿ ನನ್ನನ್ನು ಸೇರುವಳೆಂದು ನಂಬಿದ್ದೇನೆ. ಗೆಳೆಯಾ—ಈಗಲೂ ಯಾವ ಹಸುಮನನ್ನು ನೋಡಿದರೂ, ಬಾಳೆಹಣ್ಣು ಕೊಡಲು ಹಣವಿಲ್ಲದಿದ್ದರೂ ಒಂದು ಕ್ಷಣ ನಿಂತು ಪ್ರೇಮಪೂರ್ವಕ ದೃಷ್ಟಿಸಿ, ಮುನ್ನಡೆಯುತ್ತೇನೆ."

—ಹೀಗೆಂದು ಮುಗಿಸಿ, ಥೋಮ್ಸನ್ ತರುಣಿಯನ್ನು ನೋಡಿ, ಕೀಣುವು ಸುಮ್ಮಗಾದನು.

"ಕೀಣು!"—ಎಂದೆ.

"ಏನು!"

"ನಿನ್ನ ಪ್ರೇಮವು ಇಂಗ್ಲಿಷ್ ಎನ್ನುವಿಯಾದರೆ, ನಾನೂ ಅದನ್ನನುಭವಿಸಿರುವೆನು. ನನಗೆ ಅನುಭವವಿಲ್ಲವೆನ್ನಬೇಡ. ಹೇಳಲೇ?"

"ನನ್ನ ಪಾತಿಯ ಕಥೆಗಿಂತ ಕರುಣಾಜನಕವಾದುದೇ?"

"ಹೇಳುವೆನು. ಮತ್ತೆ ನೀನೇ ಅಭಿಪ್ರಾಯ ಹೇಳು."

ಆದರೆ, ಅಂದು ಆ ಕಥೆ ಹೇಳುವ ಭಾಗ್ಯ ನನಗಿಲ್ಲ. ಮೂದೇವಿ ಊಟಕ್ಕೆ ತಯಾರಾಗಿದೆಯೆಂದು ಕರೆದಳು. ನಾನು ಹೋದೆ: ಕೀಣುವು ನಾಳೆ ಬರುವೆನೆನ್ನುತ್ತ ಹೊರಟುಹೋದನು.

---

# ೭. ಜನರೆಲ್ಲ ಕುರಿಗಳು!

ಅದೊಂದು ದಿನ. ಎಂತಹ ದಿನ! ಅದನ್ನಿನ್ನು ಮರೆಯುವುದಿದೆಯೇ! ಸೆಖೆ ಎಂದು ಒಂದು ಹೊಟೇಲಿಗೆ ಪ್ರವೇಶಿಸಿ, ತಂಪಗಿನ ಪಾನೀಯದ ಬದಲಾಗಿ ಚಹಾವನ್ನೇ "ಆರ್ಡರ್"ಮಾಡಿದೆ. ಚಹಾ ಬಂತು. ಮೆಲ್ಲನೆ, ಗಾಳಿಯೂದಿ ಒಂದೊಂದೇ ಗುಟುಕು ಕುಡಿಯುತ್ತಾ ಇದ್ದೆ. ಕೈಯಲ್ಲಿ ಬಟ್ಟಲು ಇತ್ತು. "ಕಪ್ಪು" ಮೇಜಿನ ಮೇಲಿತ್ತು. ಟಣ್ಣೆಂದು ಶಬ್ದ ವಾಯಿತು. ನೋಡಿದರೆ ನನ್ನ ಚಹಾ ತಟ್ಟೆಯು ಅಡ್ಡಬಿದ್ದಿತ್ತು.

"ಕ್ಷಮಿಸಿರಿ. ನನ್ನ ಕೈತಗಲಿ ಅದು ಬಿದ್ದುಬಿಟ್ಟಿತು." ಎಂದಿತೊಂದು ವ್ಯಕ್ತಿ. ಅವನೊಬ್ಬ ಚಿಕ್ಕ ಮನುಷ್ಯ.

"ಚಿಂತೆಯಿಲ್ಲ!" ಎಂದು ಚಿಂತೆಯಿಂದ ಹೇಳಿದೆ.

"ಛೇ ಛೇ, ಹಾಗೆನ್ನಲಾಗದು!" ಎಂದು ಒತ್ತಾಯದಿಂದ ನಾನು ಬೇಡವೆಂದು ಎಷ್ಟು ಹೇಳಿಕೊಂಡರೂ ಕಿವಿಗೊಡದೆ ಮತ್ತೊಂದು ಕಪ್ ಚಹಾ ತರಿಸಿದನು.

ಇನ್ನು ಮಾತು ಪ್ರಾರಂಭವಾಯಿತು ನಮ್ಮೊಳಗೆ. ನಯವಾಗಿ ಕ್ಷೌರ ಮಾಡಿಕೊಂಡ ಮುಖ ಆತನದು. ನೋಡಲು ಹಿತಕರ. ಹಾಗೆಯೇ ಅವನ ಮಾತೂ ಸವಿಯಾಗಿ ತೋರುತಿತ್ತು. ಮಾತಾಡುತ್ತಿದ್ದಂತೆ— "ಗಾಂಧಿಜಿಯವರು ಹೇಳುವುದೆಲ್ಲ ಸರಿ. ಅವರು ಯಾವಾಗಲೂ ಸರಿಯಾದುದನ್ನೆ ಹೇಳುತ್ತಾರೆ" ಎಂದನು.

"ಹೂಂ" ಎಂದೆ.

ಆ ಮೇಲೆ, ಅಕ್ಕಿಯ ದರಗಳ ಮಾತೆತ್ತಿದನು. ನನಗೆ ಆ ವಿಷಯವೂ ಹೆಚ್ಚು ಗೊತ್ತಿಲ್ಲದ ಕಾರಣ, ಆತನು ಹೇಳಿದುದನ್ನೆ ಕೇಳುತ್ತ ಸುಮ್ಮಗಿದ್ದೆ.

ಅಲ್ಲಿಂದ ಮುಂದೆ ರಾಜಕೀಯಗಳಿಗೆ ದುಮ್ಮಿಕ್ಕಿದನು. ಆ ಮೇಲೆ ಚಮತ್ಕಾರದಿಂದ ಮುನ್ನಡೆಯುತ್ತ, ಕೊನೆಗೆ ಪತ್ರಿಕೆಗಳ ವಿಷಯವನ್ನೆತ್ತಿ, "ನಮ್ಮ ಪತ್ರಿಕೆಗಳು ಏನು ಹೇಳುತ್ತವೋ ಆ ಅಭಿಪ್ರಾಯವನ್ನೇ ನಾವು ನಂಬಿ, ಅದನ್ನೇ ನಮ್ಮದಾಗಿ ಸ್ವೀಕರಿಸುತ್ತೇವೆ. ಸ್ವತಂತ್ರ ಆಲೋಚನೆಯೇ ಯಾರೊಡನೆಯೂ ಇಲ್ಲ. ಒಬ್ಬನು ಏನು ಹೇಳುತ್ತಾನೋ ಅವನನ್ನು ಮತ್ತೆ ಹತ್ತು ಮಂದಿ ಅನುಮೋದಿಸಿ ಬೆನ್ನುತಟ್ಟುವರು. ಒಬ್ಬನು ಒಂದು ಹೊಂಡಕ್ಕೆ ಹಾರಿದರೆ, ಕುರಿಗಳಂತೆ ಇತರರೂ ಹಿಂದು ಮುಂದು ನೋಡದೆ ಹಾರುವರು. ಜನರೆಲ್ಲ ಕುರಿಗಳು!" ಎಂದು, ಒಂದು ದೀರ್ಘ ಶ್ವಾಸವನ್ನೆಳೆದನು.

ನಾನು ತಲೆಯಲ್ಲಾಡಿಸಿದೆ.

ಅವನು ಉತ್ತೇಜನಗೊಂಡು ಮುಂದುವರಿದನು: "ನೋಡಿ, ಉದಾಹರಣಾರ್ಥ:—ನೀವು, ಜನಸಂಚಾರವಿರುವ ಒಂದು ಪ್ರದೇಶದಲ್ಲಿ ನಿಂತು, ಕಾರಣವಿಲ್ಲದೆ ಆಕಾಶಕ್ಕೆ ತಲೆಯೆತ್ತಿರಿ; ಅಥವಾ ಒಂದು ಸಂಕದ ಮೇಲೆ ನಿಂತು ನೀರಿಗೆ ನೋಡುತ್ತಿರಿರಿ. ಅತ್ತ ಇತ್ತ ಹೋಗುವ ಜನರು ತಾವೂ ನಿಂತು, ನೀವು ನೋಡುತ್ತಿರುವಲ್ಲಿ ನೋಡಲಾರಂಭಿಸುವರು. ಹಾಗೆ ನಿಮಿಷಾರ್ಧದಲ್ಲಿ, ಹಾಗೆ ನೋಡುತ್ತಿರುವವರ ಸಂಖ್ಯೆ ಹೆಚ್ಚುವುದು. ಗಾಡಿ ಸಂಚಾರಕ್ಕೆ ಆತಂಕವಾಗುವುದು. ನೀವು ನಿಮ್ಮಷ್ಟಕ್ಕೆ ಅಲ್ಲಿಂದ ಹೋಗುವಿರಿ. ಆದರೂ, ಜನಸಂದಣಿ ಮಾತ್ರ ಅಲ್ಲೆ ನಿಂತು ನೋಡುವುದು. ನೀವು ಮರುದಿನ ಬಂದು ನೋಡಿದರೂ, ಕೆಲವರಿನ್ನೂ ಅಲ್ಲೆ ನಿಂತು ನೋಡುತ್ತಿರುವುದು ಕಂಡುಬಂದೀತು!—ಎನ್ನುತ್ತ—"ತಲೆಯೇ ಇಲ್ಲ ಜನರಿಗೆ, ಜನರೆಲ್ಲ ಕುರಿಗಳು!" ಎಂದು ಮುಗಿಸಿದನು.

"ಇದು ಸ್ವಲ್ಪ ಉತ್ಪ್ರೇಕ್ಷೆಯಾಯಿತು!" ಎಂದೆ, ನಸುನಗುತ್ತ.

"ನೀವೆಣಿಸಿದಷ್ಟು ಉತ್ಪ್ರೇಕ್ಷೆಯಲ್ಲ!" ಎಂದನು.

"ನಿಮ್ಮ ಮಾತು ವಿಚಿತ್ರವೂ ಕಾಣುತ್ತಿದೆ!" ಎಂದೆ.

"ಎಳ್ಳಷ್ಟು ಇಲ್ಲ. ನಾನು ಹೇಳಿದ್ದೆಲ್ಲ ಅಕ್ಷರಶಃ ನಿಜ. ರುಜು ಮಾಡಿ ತೋರಿಸಬಲ್ಲೆ. ಪಂಥವುಂಟೇ?" ಎಂದನು.

"ಇದೆ!" ಎಂದೆ. ಒಂದು ಬಗೆಯ ಸ್ಪರ್ಧೆಯ ಉತ್ಸುಕತೆಯುಂಟಾಗಿತ್ತು ನನ್ನಲ್ಲಿ.

"ಹಾಗಾದರೆ ಪಂಥಕಟ್ಟಿರಿ–ಕೇವಲ ಎರಡು ರೂಪಾಯಿಗಳಿಗೆ! ನೋಡಿ ಅಲ್ಲಿ, ದೇವಸ್ಥಾನದ ಕೆರೆಯಿದೆ. ಅಲ್ಲಿಗೆ ನಾನೂ ನೀವೂ ಹೋಗಿ ಒಂದು ನಿಮಿಷ ನಿಂತು ಕೆರೆಯನ್ನೇ ನೋಡುತ್ತಿರುವ. ಹತ್ತು ನಿಮಿಷಗಳಲ್ಲಿ ನೂರು ಜನರು ಕೂಡುವುದನ್ನು ನಿಮಗೆ ತೋರಿಸಬಲ್ಲೆ. ಜನರು ಕೂಡುತ್ತಲೇ ನಾನೂ ನೀವೂ ಮೈದಾನಿನ ಒಂದು ಸುತ್ತು ತಿರುಗಿ ಬರುವ. ಆಗಲೂ ಜನರ ಗುಂಪು ಅಲ್ಲೇ ಇರುವುದನ್ನು ನಿಮಗೆ ತೋರಿಸಬಲ್ಲೆ! ನಾನು ಸೋತರೆ ನಿಮಗೆ ಎರಡು ರೂಪಾಯಿಗಳನ್ನು ಕೊಡುವೆನು. ನೀವು ಸೋತರೆ ನನಗೆ ಕೊಟ್ಟರಾಯಿತು!" ಎಂದನು.

ನಾನು ಕುತೂಹಲದಿಂದ, "ಒಪ್ಪಿದೆ! ಏಳಿರಿ!" ಎನ್ನುತ್ತ, ನಾನೂ ಆತನೂ ರಥಬೀದಿಯಿಂದ ಮಹಾಮ್ಮಾಯಿ ಕೆರೆಯ ಬಳಿಗೆ ಬಂದೆವು. ಬಂದು ನಾನೂ ಆತನೂ ರಸ್ತೆಯಲ್ಲಿ ನಿಂತು, ಕೆರೆಯ ಕಡೆಗೆ ನೋಡಿದೆವು.

ಐದೇ ನಿಮಿಷ,—ಕೂಡಿದ್ದರು ಆಗಲೇ ನಮ್ಮ ಬದಿಗಳಲ್ಲಿ ಸುಮಾರು ಇಪ್ಪತ್ತು ಜನರು! ನನ್ನ ಸಂಗಾತಿಯು ವಿಜಯಸೂಚಕ ದೃಷ್ಟಿಯಿಂದ ನನ್ನನ್ನು ನೋಡಿದನು. ಇನ್ನೆರಡು ನಿಮಿಷಗಳೊಳಗೆ ಜನಸಂಖ್ಯೆಯು ಐವತ್ತರಷ್ಟಾಯಿತು. ನನ್ನ ಸಂಗಾತಿಯು ನಸುನಗುತ್ತ "ಸ್ವಲ್ಪ ಕೆಲಸವಿದೆ. ನಮ್ಮ ಪಂಥದ ಅವಧಿಗೆ ಇನ್ನೂ ಮೂರು ನಿಮಿಷಗಳಿವೆ. ಅಷ್ಟರಲ್ಲಿ ಮರಳುವೆನು" ಎನ್ನುತ್ತ ನಡೆದುಹೋದನು. ನಾನು ನಿಂತು ನೋಡಿದೆ.

ಹತ್ತು ನಿಮಿಷಗಳಾದವು. ಜನಸಂದಣಿಯು ವಿಶೇಷವಾಗಿ ಬೆಳೆದಿದೆ! ಅಂದಾಜು ಲೆಕ್ಕ ಹಾಕಿದೆ, ಸುಮಾರು ನೂರಐವತ್ತು ಜನರಿರುವರು. ಎಲ್ಲರೂ ಕೆರೆಗೇ ನೋಡುತ್ತಿದ್ದಾರೆ. ಏನೋ ಅದ್ಭುತವೀಗ ನಡೆಯಬಹುದೆಂಬ ನಿರೀಕ್ಷೆಯೋ ಏನೋ! ಎಲ್ಲರ ಮುಖಗಳಲ್ಲಿ ಪಶುಗಳಂತಹ ಛಾಯೆ! ಕುರಿಗಳಹುದು! ನನ್ನ ಸಂಗಾತಿಯು ಹೇಳಿದುದರಲ್ಲಿ ಅತಿಶಯೋಕ್ತಿ ಏನೂ ಇಲ್ಲವೆಂದು ಖಚಿತವಾಯಿತು. ಅವನೆಲ್ಲಿರುವನೆಂದು ಸುತ್ತಲೂ ನೋಡಿದೆ. ಎಲ್ಲಿಯೂ ಆತನ ಮುಖ ಕಾಣಸಿಗಲಿಲ್ಲ. ತನ್ನ ಎರಡು ರೂಪಾಯಿಗಳನ್ನು ಪಡೆಯಲು ಈಗ ಬರುವನೆಂದು ಮತ್ತೂ ಹತ್ತು ನಿಮಿಷ ಕಾದು ನಿಂತೆ. ಇಲ್ಲ, ಬರಲಿಲ್ಲ. ಮನೆ ಕಡೆಗೆ ಹೊರಟೆ. ಮನೆಗೆ ಹೋಗಿ ಮುಟ್ಟಿದೆ.

ಕೋಟನ್ನು ತೆಗೆದಿಡಲು ಹೋದಾಗ,—ಸ್ಸ್!—ನನ್ನ ವಾಚು ಕಾಣೆ! ಅಂಗಿ ಕಿಸೆಗೆ ಕೈಹಾಕಿದಾಗ ದುಡ್ಡಿನ ಚೀಲ ಕಾಣೆ! ಅಂಗಿಯ ಮೇಲ್ಕಿಸೆಯಲ್ಲಿ ನೋಡಿದಾಗ ಫೌಂಟನ್ ಪೆನ್ ಕಾಣೆ! ಆಗ,—ಆಗ ನನಗೆ ಚೆನ್ನಾಗಿ ಖಚಿತವಾಯಿತು, ಆತನು ಹೇಳಿದುದರ ಪೂರ್ಣ ರುಜುವಾತು ಸಿಕ್ಕಿತು—"ಜನರೆಲ್ಲ ಕುರಿಗಳು!"

ನನ್ನ ಎದೆಯೊಳಗಿನ ಅಗ್ನಿ ಇನ್ನೂ ಆರಿಲ್ಲ. ಆ ಕಿಸೆಮಗನು ಇನ್ನೆಲ್ಲಿ ಕಾಣಸಿಗುವನೋ ಎಂದು ಸೇಡಿನ ತೃಷೆಯಿಂದ ಕಾಯುತ್ತಿದ್ದೇನೆ!

---

## ೮. ಬೇಬಿ ಯಾನೆ ವೆಂಕಟೇಶ ಕಮ್ತಿ

ಅವನ ಹೆತ್ತವರು ಅವನಿಗೆ "ಬೇಬಿ" ಎಂದೇ ಹೆಸರಿಟ್ಟರು. ಅವನು ಚಿಕ್ಕ ಮಗುವಿನ ಹಾಗೇ ನಡಕೊಳ್ಳುತ್ತಿದ್ದುದು ಮಾತ್ರವಲ್ಲ, ನಿಜವಾಗಿಯೂ ಚಿಕ್ಕ ಮಗುವಾಗಿದ್ದನು. ಅವನ ತಂದೆಯ ವರದಿಯನ್ನು ನಂಬಬಹುದಾದರೆ,—ಬೇಬಿ ಮಹಾಶಯನು ಒಂದು ವರುಷ ಪ್ರಾಯದಲ್ಲಿ ಒಂದೆರಡು ತಿಂಗಳೊಳಗೆ ನೂರು ಬಾಟಲಿಗಳನ್ನು ಒಡೆದುಹಾಕಿ, ಮೂರು ಬಾರಿ ದೊಡ್ಡ ಮೇಜನ್ನು ಅಡ್ಡಹಾಕಿ ಅಪಘಡವಿಲ್ಲದೆ ತಪ್ಪಿಸಿಕೊಂಡು, ಏಳು ಬಾರಿ ತೊಟ್ಟಿಲಿಂದ ಕೆಳಗೆ ಹಾರಿ ನಗುತ್ತ, ಎರಡನೇ ಭೀಮಾವತಾರದ ಸಂದೇಹ ಹುಟ್ಟಿಸಿದ್ದನು.

ಬೇಬಿಯ ನಿಜವಾದ ಹೆಸರು ಕೊಟ್ಟಂಪಾಡಿ ವೆಂಕಟೇಶ ಕಮ್ತಿ ಎಂದಿದ್ದರೂ, ಅವನಿಗೇ ಉಚ್ಚಾರಕ್ಕೆ ಸರಿಬರಬೇಕೆಂದು ತಾಯಿಯ ಒತ್ತಾಯದಿಂದ "ಬೇಬಿ" ಎಂದರು. ಬೇಬಿಯ ತಂದೆ ಕೊಟ್ಟಂಪಾಡಿ ಗೋವಿಂದ ಕಮ್ತಿಯರು ಸ್ವರಗಳನ್ನು ಸರಿ ಉಚ್ಚರಿಸುತಿದ್ದಿಲ್ಲವಾದರೆ, ಮಗ ವೆಂಕಟೇಶ ಕಮ್ತಿಯರು (ಯಾನೆ ಬೇಬಿ) ವ್ಯಂಜನಗಳನ್ನು ಬಹಿಷ್ಕರಿಸಿದ್ದರು.

ಬೇಬಿಯ ವಯಸ್ಸು ಈಗ ಎರಡುವರೆ ವರುಷಗಳಾಗಿದ್ದುವು.

ಕೆಲಸದವಳು ತರಕಾರಿ ತರಲು ಹೋಗುವಾಗ ಬೇಬಿಯನ್ನೂ ಮಾರ್ಕೆಟಿಗೆ ಕರಕೊಂಡುಹೋಗುವ ಪದ್ಧತಿ. ಪ್ರತಿದಿನ ಕೆಲಸದವಳು ಹೊರಟಾಗ ಬೇಬಿಯು ಕೈಕಾಲುಗಳನ್ನು ಒಡೆದು ಉತ್ಪಾತದ ಚಿಹ್ನೆಗಳನ್ನು

ತೋರಿಸಿದನಂತರ ಒಪ್ಪಂದವಾಗಿ ಬೇಬಿಯನ್ನು ಕರಕೊಂಡು ಹೋಗು ವುದು ರೂಢಿ. ಈ ದಿನವೂ ಕೆಲಸದವಳು ಹೊರಟಳು; ಬೇಬಿಯು ಪದ್ಧತಿ ಯಂತೆ ಕೈಕಾಲುಗಳನ್ನು ಬಡೆದು ದಪ್ಪಗೆ ಅತ್ತನು; ಒಪ್ಪಂದವಾಯಿತು. ಬೇಬಿಯು ಮಾರ್ಕೆಟಿಗೆ ಹೊರಟನು.

ಮಾರ್ಕೆಟ್ ಖರೀದಿಯಲ್ಲಿ ಬೇಬಿಯಿಂದ ಅಂಗಡಿಗಾರರಿಗೆ ತುಂಬ ಉಪಕಾರವಾಗುತಿತ್ತು. ಪ್ರತಿ ಅಂಗಡಿಯ ಬಳಿಯೂ ಬೇಬಿ ಅತ್ತು, ತಲಾ ಕಾಲಾಣೆಯಂತೆ ವೆಚ್ಚಮಾಡಿಸುತಿದ್ದನು. ಮತ್ತೆ ತನ್ನ ಸ್ವಂತ ಉಪ ಯೋಗದ ಬಗ್ಗೆ ಕೊಂಡುಕೊಂಡ ವಸ್ತುಗಳನ್ನು ಕಿಸೆಗೆ ತುರುಕಿಸಿಕೊಂಡು, ದಾದಿಯಿಂದ ತಪ್ಪಿಸಿಕೊಂಡು ಓಡಿ, ಅರ್ಧತಾಸಿನನಂತರ ದಾದಿಗೆ ಸಿಕ್ಕುತ್ತಿದ್ದನು.

ಈ ದಿನವೂ ಬೇಬಿಯು ಕಾಣೆಯಾದನು. ಹೆದರಲಿಲ್ಲ; ಅಭ್ಯಾಸ ವಾಗಿತ್ತು. ದಪ್ಪಗಿನ ಒಬ್ಬ ಮನುಷ್ಯನಿಗೆ ಡಿಕ್ಕಿಹೊಡೆದು, ಅವನನ್ನು ಮೂರಡಿ ಹಾರಿಸಿದನು. ಒಂದು ಅಂಗಡಿಯ ಬಾಗಿಲಲ್ಲಿಟ್ಟ ಮಾವಿನ ಹಣ್ಣನ್ನು ತೆಗೆದು, ಹಣಕೊಡದೆ, ಹಣ್ಣನ್ನೂ ಕೊಡದೆ, ಮೈಮುಟ್ಟಲು ಬಂದರೆ, ಇಲೆಕ್ಟ್ರಿಕ್ ರೈಲುಬಂಡಿಯಂತೆ ಶಬ್ದಮಾಡಿ, ಆಫ್ರಿದಿಗಿಂತಲೂ ಭಯಂಕರವಾಗಿ ತೋರಿದನು.

ಅರ್ಧ ತಾಸಾಯಿತು. ಬೇಬಿ ದಣಿದನು. ಪದ್ಧತಿಯಂತೆ ಕೆಲಸ ದವಳನ್ನು ಹುಡುಕಿದರೆ, ಅವಳಿಲ್ಲ. ತಾನು ಆಕೆಯನ್ನು ಎಲ್ಲಿ ಬಿಟ್ಟದ್ದನೋ ಅಲ್ಲಿಗೆ ಬಂದು ನೋಡಿದನು. ತಾನು ಮೂರಡಿ ಹಾರಿಸಿದ ದಪ್ಪಗಿನ ಮನುಷ್ಯನು ಇನ್ನೂ ಅಲ್ಲೇ ನಿಂತು ಆಶ್ಚರ್ಯದಿಂದ ದೃಷ್ಟಿ ಇಳಿಸದೆ ಇದ್ದು ದನ್ನು ಕಂಡು, ಈ ಸ್ಥಳದಲ್ಲೇನೋ ಸುಖವಿಲ್ಲವೆಂದು ಸ್ವಲ್ಪ ದೂರ ಸರಿ ದನು. ಕೊನೆಗೆ, ಕರ್ಮಹೀನನಾದರೆ ಫಲ ಸಿದ್ಧಿಯಾಗದೆಂದು ತಿಳಿದವ ನಾಗಿ, ಸುರಕ್ಷಿತ ಸ್ಥಳವನ್ನು ಹುಡುಕಿ ಅಲ್ಲಿ ಗಂಭೀರವೆನಿಸುವಂತೆ ನಿಂತು ಸ್ಥಾನಗೌರವವನ್ನರಿತು, ಕ್ರಮದಂತೆ ಮೊದಲು ಮೆಲ್ಲಗೂ ನಂತರ ಜೋರಾ ಗಿಯೂ ಅಳಲಾರಂಭಿಸಿದನು.

ವ್ಯರ್ಥವಾಗಲಿಲ್ಲ. ಮುದುಕಿಯೊಬ್ಬಳು ಅತ್ತ ಹೋಗುತಿದ್ದವಳು ನಿಂತು, "ಏನು ಮಗು?" ಎಂದು ಕೇಳಿದಳು.

"ಯುಯಿಯಾಯೂ" ಎಂದನು, ಬೇಬಿ ಕವ್ವಿ.

"ಅಳಿಲೇ?" ಎಂದಳು ಮುದುಕಿ.

"ಯುಯಿಯಾಯೂ ಯುಯಾಯುಯಿ" ಎಂದನು ಬೇಬಿ ಕವ್ವಿ.

ಮುದುಕಿಯು ದಿಗ್ಭ್ರಾಂತಿ ಹೊಂದಿ, ಆತ್ತ ಬರುತಿದ್ದ ಮತ್ತೋರ್ವ ಹೆಂಗುಸನ್ನು ನಿಸ್ಸಹಾಯತೆಯಿಂದ ದೃಷ್ಟಿಸಿದಳು.

"ಈ ಮಗು........"

"ಮಗು ಅಹುದೆಂದು ತೋರುತ್ತದೆ. ಆದರೆ, ಅದು ಹೇಳುವುದೇ ನೆಂದು ಅರ್ಥವಾಗುವುದಿಲ್ಲ" ಎಂದಳು ಮುದುಕಿ.

ಎರಡನೆ ಹೆಂಗಸು ಭರವಸೆಯಿಂದ, "ಗಾಬರಿಯಿಲ್ಲ. ನನಗೆ ಮಕ್ಕಳ ಅಭ್ಯಾಸವಿದೆ. ನೋಡೋಣ. ಮಗು! ಹುಚ್ಚರ ಹಾಗೆ ಅಳಬೇಡ. ಏನೆಂದು ಹೇಳು. ನೀನು ಒಬ್ಬನೇ ಇರುವಿಯೋ?" ಎಂದು ಕೇಳಿದಳು.

ಬೇಬಿಗೆ, ಹೆಂಗುಸಿನ ಪ್ರಶ್ನೆಗೆ ಉತ್ತರ ಕೊಡುವ ಅವಶ್ಯಕತೆ ತೋರದೆ ದೃಷ್ಟಿಯನ್ನು ಮಾತ್ರ ತಿರಸ್ಕಾರಕ್ಕೆ ರೂಪಿಸಿ, ಅಳುವನ್ನು ಮೊದಲಿನಂತೇ ಮುಂದುವರಿಸಿದನು.

"ನೀನು ಯಾರೊಡನೆ ಇರುವಿ?" ಹೆಂಗುಸು ಕೇಳಿದಳು,

"ಯೊಯುಯ್ಯ!"—ಎಂದು ಬೇಬಿ ಕವ್ವಿಯು ಕಷ್ಟದಿಂದ ವಿವರಿಸಿದನು.

"ಸೋಮಕ್ಕನೇ?"

"ಯೋ!"—ಬೇಬಿ ಕೋಪದಿಂದ ಕೂಗಿದನು.

"ಯಾಯಿಯೊಯು ಯಾಯಿಯನ್ನೆ!"

"ನೀನೊಂದು ನಾಯಿ ಕಂಡೆಯಾ?"

ಬೇಬಿಯ ಕೋಪ ಇನ್ನೂ ಹೆಚ್ಚಿತು. ಮುದುಕಿಯು ಎರಡನೆ ಹೆಂಗುಸನ್ನು ನೋಡುತ್ತ, "....ಂಡೆ ಎಂದರೇನೊ!" ಎಂದಳು.

ಅಷ್ಟರೊಳಗೆ ಹಲವರು ಕೂಡಿದ್ದರು. ಅವರಲ್ಲಿ ಒಬ್ಬ ಗಂಡಸು ಬಹಳ ಅಧಿಕಪ್ರಸಂಗಿ. "ಏನಂತೆ?" ಎಂದನು.

"ಮಗು ಕೂಗುತ್ತಾ ಇದೆ. ಅದು ಏನು ಹೇಳುತ್ತಿದೆಯೋ ಅರ್ಥವಾಗುವುದಿಲ್ಲ" ಎಂದರು, ಇಬ್ಬರು ಹೆಂಗುಸರು.

"ಬಹುಶಃ ತಾಯಿಯನ್ನು ಕಳಕೊಂಡಿದ್ದಾನೆಂದು ತೋರುವುದು. ಮಗು, ನಿನ್ನ ಹೆಸರೇನಪ್ಪ?" ಎಂದು ಕೇಳಿದನು ಪುರುಷ ಮಹಾಶಯ.

"ಯೋಯಿಯೊಯಯ್ಯೊ" ಎಂದನು ಬೇಬಿ.

ಪುರುಷಮಹಾಶಯನಿಗೆ ಒಂದೇ ಮಾತಿನಿಂದ ತಲೆಕರಡಾಯಿತು. "ಮಗುವು ಕನ್ನಡ ಮಾತಾಡುತ್ತಿದೆಯೆಂದು ನಾನು ನಂಬುವುದಿಲ್ಲ" ಎಂದನು.

"ಅವನು ಮುಸಲ್ಮಾನನಿರಬಹುದೆಂದು ಕಾಣುತ್ತಿದೆ. ಕಿವಿ ಚುಚ್ಚಿಲ್ಲ. ನೋಡೋಣ. ನಾಮ್ ಕ್ಯಾ ಭೇಟಾ?" ಅದು ಎರಡನೆ ಪುರುಷನೊಬ್ಬನ ಪ್ರೇಮದ ಪ್ರಶ್ನೆ.

ಮೂರನೆಯವನೊಬ್ಬನು ತುಳುವನ್ನೂ ನಾಲ್ಕನೆಯವನು ಇಂಗ್ಲಿಷನ್ನೂ ಪ್ರಯತ್ನಿಸಿದರು. ಬೇಬಿಯು ಹಲವು ಬಣ್ಣಗಳನ್ನು ತಾಳಲು, ಬೇಬಿಯು ಮುಸಲ್ಮಾನನಲ್ಲವೆಂದು ನಿರ್ಧಾರವಾಯಿತು. ಬೇಬಿಯ ಮಾತೃಭಾಷೆಯನ್ನು ಮಾತ್ರ ಯಾರೂ ಯತ್ನಿಸಲಿಲ್ಲ. ದ್ರಾಕ್ಷೆ ಮಾರುವವನೊಬ್ಬನು ಬಂದು ಎರಡು ದ್ರಾಕ್ಷೆಗಳನ್ನು ಎದುರಿಗೆ ಹಿಡಿದು ಮಲೆಯಾಳಿಯಲ್ಲಿ ಪ್ರಶ್ನಿಸಲು, ಬೇಬಿಯು ದ್ರಾಕ್ಷೆಗಳನ್ನು ಕಸಕೊಂಡು ಬಿರುಸಾಗಿ ಬಿಸುಡಿ, ಇನ್ನು ಅಂತಹ ನೂರಾರು ದ್ರಾಕ್ಷೆಗಳನ್ನು ಬಿಸುಡುವ ಶಕ್ತಿ ತನ್ನಲ್ಲಿದೆಯೆಂಬ ಅರ್ಥದಿಂದ ನೋಡಿದನು. ಸೋವಿಯಟ್ ರಷ್ಯದಿಂದ ಕಮ್ಯೂನಿಝಂ ಪ್ರಚಾರಕ್ಕಾಗಿ ತಂದ ಮಗು ಇದಾಗಿರಬೇಕೆಂದು ಯಾರೋ ಒಬ್ಬರು ಸೂಚಿಸಲು, ಮೊದಲಿನ ಮುದುಕಿಯು ಏನೊಂದೂ ಅರ್ಥವಾಗದೆ, ಆ ಪ್ರಶ್ನೆಗೆ ಬೆಲೆಯೇ ಇಲ್ಲವೆಂದಳು. ಹಿಂದೀ ವಿರೋಧಿಗಳ ಆಟ ಇದಾಗಿರಲಾರದೆಂದು ಬಂದ ಕೆಲವು ಸುಶಿಕ್ಷಿತರು ಅಭಿಪ್ರಾಯಪಟ್ಟರು. ಯಾರೋ ಫಿಲ್ಮ್ ತೆಗೆಯಲು ಹೀಗೆ ಆಟ ಹೂಡಿದ್ದಿರಬಹುದೇ ಎಂಬ ಸಂದೇಹವೊಂದು ಚಲಚ್ಚಿತ್ರ ಪ್ರೇಮಿಯೊಬ್ಬನಿಂದ ಹೊರಟು, ಹಲವರಲ್ಲಿ "ಅಹುದಾಗಿರಬಹುದೆ?" ಎಂಬ ಶಂಕೆ ಹುಟ್ಟಿಸಿ,—ಎಲ್ಲಿಂದಲೋ ಕೆಮರವೊಂದು ತಮ್ಮನ್ನು ನೋಡುತ್ತಿದೆಯೆಂಬ ಭ್ರಾಂತಿಯಿಂದ ಎಲ್ಲರೂ ಮುಖಗಳನ್ನು ಆದಷ್ಟು ಸುಂದರವಾಗಿ ಹಿಡಿಯಲು ಯತ್ನಿಸಿದರು. ಈ ಗಲಭೆಯಲ್ಲಿ ಬೇಬಿ ಕಮ್ತಿಯು ಮುದುಕಿಯ ಕೈಯಲ್ಲಿದ್ದ ಕೊಡೆಯ ರಬ್ಬರ್ ಕಟ್ಟನ್ನು ಜಾರಿಸಿದ್ದನು.

"ಕೊಡು ಇತ್ತ!" ಎಂದು ಮುದುಕಿಯು ಬೇಬಿ ಕಮ್ತಿಗೆ ಹೆದರಿಸಿದಳು. ಬೇಬಿಯು ಕಟ್ಟನ್ನು ಪುನಃ ಕೊಡೆಗೇ ಸಿಕ್ಕಿಸಿದನು.

"ನೀನು ಕನ್ನಡದಲ್ಲಿ ಹೇಳಿದುದು ಅವನಿಗೆ ಅರ್ಥವಾಗುತ್ತದೆ" ಎಂದರೊಬ್ಬರು.

"ಅವನು ಕನ್ನಡಿಗನೇ!" ಎಂದಳು ಮುದುಕಿ, ಗೌರವದಿಂದ.

"ಹುಟ್ಟುವಾಗಲೇ ತಲೆ ಕೊಳೆತ ಒಂದು ಮಗುವಾಗಿರಬಹುದು" ಎಂದೊಬ್ಬರು ಅಭಿಪ್ರಾಯ ಸೂಚಿಸಿದರು. ಕೂಡಲೇ ಕೆಲವರು, ಹುಲಿ ಕಂಡಂತೆ ಹೆದರಿ ಹಿಂದೆ ಸರಿದರು.

"ನಾನು ಪುನಃ ಯತ್ನಿಸುತ್ತೇನೆ!" ಎನ್ನುತ್ತ ನಾಲ್ಕನೆಯ ಪುರುಷಾವತಾರವೊಂದು ನಡುವೆ ನುಸುಳಿ, "ನೀನೆಲ್ಲಿ ಇರುವುದು ಪುಟ್ಮಣಿ?" ಎಂದಿತು.

"ಯಯ್ಯಯ್ಯಯ್ಯಯಿ" ಎಂದನು ಬೇಬಿ.

"ಚಯ್ಯಬ್ಬ ಬ್ಯಾರಿ ಎಂದು ಹೇಳಿದ ಹಾಗೆ ಕೇಳಿಸುತ್ತದೆ" ಎಂದನು ಚತುರ್ಥ ಪುರುಷ.

ಬೇಬಿ ಕಮ್ತಿಗೆ ಚತುರ್ಥ ಪುರುಷನ ಸ್ವರ ಕೇಳಿ ಅಸಹ್ಯವೆನಿಸಿ,—ಅಷ್ಟರೊಳಗೇ ಆ ಮುದುಕಿಯು ಕೊಡೆಯಿಂದ ಪುನಃ ಜಾರಿಸಿ, ಕೈಯಲ್ಲಿ ಹಿಡಿದ ರಬ್ಬರಿನ ನೆನಪಾಗಿ, ಆ ರಬ್ಬರನ್ನು ತೆಗೆದು ಚತುರ್ಥ ಪುರುಷನ ಮುಖಕ್ಕೇ ಬಿಸುಡಿದನು.

"ಹೋ ಓ, ಓ, ಓ—" ಎಂಬ ಸ್ವರ ಅಷ್ಟರಲ್ಲಿ ಕೇಳಿಸಿತು. ಜನರು ದಾರಿಬಿಟ್ಟರು. ಪೋಲೀಸ್ ಮನುಷ್ಯ ದೂಮಪ್ಪ ಅತ್ತ ತೇಲಿಬಂದನು. "ಏನಿದೆಲ್ಲ?"

ಪ್ರತಿಯೊಬ್ಬರೂ ವಿವರಿಸಿದರು.

ಪೋಲೀಸನು ಬೇಬಿ ಕಮ್ತಿಯನ್ನು ನೋಡಿದನು. ಬೇಬಿ ಕಮ್ತಿಗೆ ಏನೋ ಭರವಸೆ ಕಂಡು ದೂಮಪ್ಪನ ಕಡೆಗೋಡಿ ಅವನ ಕಾಲುಗಳನ್ನು ಅಪ್ಪಿ ಹಿಡಿದನು.

"ಏನು ಅಪ್ಪೂ, ದಾರಿತಪ್ಪಿದೆಯೊ?" ಎಂದು ದೂಮಪ್ಪ ಕೇಳಿದನು. ಬೇಬಿ ಕಮ್ತಿಯು ಸಂತೋಷದಿಂದ ತಲೆಯಲ್ಲಾಡಿಸಿದನು.

"ಅಯ್ಯೋ—ಅವನು ಮೂಕನೆಂದು ತೋರುತ್ತದೆ" ಎಂದನೊಬ್ಬ ಪುರುಷ.

"ಅವನಲ್ಲ!"—ಎನ್ನುತ್ತ ಪೋಲೀಸನು "ನಿನ್ನ ಹೆಸರೇನು ಪುಟ್ಟೋ?" ಎಂದು ಕೇಳಿದನು.

"ಯೇಯಿ!"

"ಬೇಬಿಯೋ?"

ಬೇಬಿ ಕಮ್ತಿಯು ತಲೆಯಲ್ಲಾಡಿಸಿದನು. ಜನಸಮೂಹದಲ್ಲಿ ಆಶ್ಚರ್ಯದ ತೆರೆಯೆದ್ದು, ಹಲವರಿಗೆ ಉಸಿರೇ ಕಟ್ಟಿಹೋಯಿತು. "ನೀನೆಲ್ಲಿ ಇರುವುದು! ಮನೆಯೆಲ್ಲಿ?"

"ಯುಯ್ಯಯ್ಯಯ್ಯೆಯ್ಯೆಯಿ!"

"ಪುನಃ ಮೆಲ್ಲನೆ ಹೇಳು ಮಗು!" (ಪೋಲೀಸನು ಕೇಳಿದನು) ಬೇಬಿ ಕಮ್ತಿಯು ಪುನಃ ಉಚ್ಚರಿಸಿದನು.

"ಹಂಪನಕಟ್ಟೆಯಲ್ಲಿ!"

ಚೀರುತ್ತ ಒಂದು ಹೆಂಗಸು ಗುಂಪನ್ನು ಭೇದಿಸಿ ಬಂದಳು. ಬೇಬಿ ಕಮ್ತಿಯು ಅವಳನ್ನು ನೋಡಿ ಹಾರುತ್ತ "ಯಾಯುಯ್ಯಾ!" ಎಂದು ಕೂಗಿದನು. "ಬೇಬಿ! ಕೆಟ್ಟ ಮಗು!" ಎನ್ನುತ್ತ, ಬೇಬಿ ಕಮ್ತಿಯ ಮನೆ ಗೆಲಸದವಳು ಬೇಬಿ ಯಾನೆ ಕೊಟ್ಟಂಪಾಡಿ ವೆಂಕಟೇಶ ಕಮ್ತಿಯನ್ನು ಹಿಡ ಕೊಂಡು ನಡೆದಳು.

ಬೇಬಿ ಕಮ್ತಿಯು ಹೋಗಿ, ಜನಸಂದಣಿಯೂ ಇಂಗಿದ ಮೇಲೆ ಮುದುಕಿಯು ಪೋಲೀಸನನ್ನು ಭಯಭಕ್ತಿಯಿಂದ ನೋಡುತ್ತ, "ನೀನು ಆ ಮಗುವಿನ ಮಾತನ್ನು ಹೇಗೆ ಅರ್ಥಮಾಡಿಕೊಳ್ಳುವಿಯೋ ದೇವರೇ ಬಲ್ಲ!" ಎಂದಳು.

"ಓ! ನನಗೂ ಮಕ್ಕಳಿವೆಯಮ್ಮ!" ಎಂದನು ಪೋಲೀಸ.

---

# ೯. ವರಾನ್ವೇಷಣ

ಮಹದೇವ ನಾಯಕರಿಗೆ ಮುಖವು ಕಹಿಯಾಯಿತು. ಆ ನಿಮಿಷದ ತನಕ ಶುದ್ಧವಿದ್ದ ವಾತಾವರಣವು ಆಕಸ್ಮಿಕ ದುರ್ಗಂಧಪೂರಿತ ವಾಯುವಿನಿಂದ ತುಂಬಿದಂತೆ ಮೂಗಿನ ಸೊಳ್ಳೆಗಳನ್ನರಳಿಸಿ ಬಲವಾಗಿ ಮೂರು ಬಾರಿ ಗಾಳಿಯೂದಿ, "ಕಲಿಗಾಲ! ೧೭೯||| ಜಾತಕಗಳು ನನ್ನ ಮುಂದಿವೆ; ಒಂದೂ ಸರಿಯಿಲ್ಲ!" ಎಂದು ನಿಟ್ಟುಸಿರ್ಗಳೆದರು.

ಬಳಿಯಲ್ಲಿ ಕುಳಿತು ವೀಳಯವನ್ನು ಜಗಿಯುತ್ತಿದ್ದ ಸುಬ್ರಾಯ ಪಂಡಿತರು, ಪೀಕದಾನಿಯೆತ್ತಿ ಉಗುಳುತ್ತ, "ಏನು, ಗುಣಿಸಿದುದು ತಪ್ಪೇ?" ಎಂದು ಪ್ರಶ್ನಿಸಿದರು.

"ಯಾರಿಗೆ ಗೊತ್ತು ಪಂಡಿತರೇ ಈ ಹಾಳು ಲೆಕ್ಕ? ಒಂದಕ್ಕೂ ಮೇಳವಿಲ್ಲ."

"ಈ ಅರ್ಧವೊಂದರ ಲೆಕ್ಕ ಹೇಳಿದಿರಲ್ಲ; ಅದು ಹೇಗೆ?"

"೧೭೯ ಜಾತಕಗಳು ಪೂರ್ಣವಾಗಿವೆ. ಕೊನೆಯದೊಂದು ಅರ್ಧ ಮಾತ್ರ ಬರೆಯಲ್ಪಟ್ಟಿದೆ. . ಕುಂಡಲಿಯೇ ಇಲ್ಲವಯ್ಯಾ. ಯಾರೋ ಗಡಿಬಿಡಿಯಲ್ಲಿ ಬರೆದು ಕಳುಹಿಸಿದ್ದ!" ಎಂದರು ನಾಯಕರು.

"ಹಾಗಾಗುವುದಿದೆ. ನನಗೆ ಬಂದ ಜಾತಕದಲ್ಲಿ ಗೋತ್ರವೇ ಕಾಣಿಸಲ್ಪಟ್ಟಿರಲಿಲ್ಲ. ನಾನೇ ಹೋಗಿ ಮಾವನನ್ನು ಕಂಡು ಗೋತ್ರದ ಹೆಸರು ಕೇಳಿ, ಲಗ್ನಕ್ಕೆ ತರಬೇಕಾದ ಸೀರೆಗಳ ವಿಚಾರವನ್ನೂ ಆಗಲೇ ಚರ್ಚಿಸಿ, ಬಂದುದು" ಎಂದು ಸಮಾಧಾನ ಮಾಡಿದರು ಪಂಡಿತರು.

"ಪಂಡಿತರೇ, ನಿಮ್ಮ ವಿಚಾರ ಹಾಗಾಯಿತು. ನೀವು ಗಂಡಸರು. ಮದುವೆಯಾಗದಿದ್ದರೂ ಚಿಂತೆಯಿಲ್ಲ. ಆದರೆ, ಹೆಣ್ಣು ಬೆಳೆದ ನನ್ನ ವಿಚಾರ ಮಾತ್ರ ಹಾಗಲ್ಲಯ್ಯಾ—ಮದುವೆ ಮಾಡುವವನೇ ಬಲ್ಲ........" ಎಂದು ದುಃಖಪೂರಿತ ಸ್ವರದಿಂದ ಹೇಳಿದರು ನಾಯಕರು.

"........ಅಲ್ಲ, ಮದುವೆ ಮಾಡಿದವನೇ ಬಲ್ಲ." ಎಂದು ನಾಯಕರನ್ನು ತಿದ್ದಿ, "ಮಾಡಿದ ಮೇಲೆ, ಮಾಡಿಕೊಂಡವನು ಮತ್ತೂ ಬಲ್ಲ" ಎಂದು

ತನ್ನಷ್ಟಕ್ಕೆ ಹೇಳಿಕೊಂಡು ಪಂಡಿತರು—"ಆ ವೆಂಕಪ್ಪ ಪ್ರಭುಗಳವರ ಮಗ–ಗುಂಡೂ ರಾಮನು........?" ಎಂದು ಸೂಚಿಸಿದರು.

"ಸೋಮಾರಿ, ಪಂಡಿತರೇ ತಾಜಾ ಸೋಮಾರಿ! ಇಲ್ಲ, ಈ ಊರಿನಲ್ಲಿ ಒಳ್ಳೆಯ ಹುಡುಗನು ಒಬ್ಬನೂ ದೊರೆವುದಿಲ್ಲ. ಇದ್ದ ಹುಡುಗರಲ್ಲಿ ನೂರ ರಲ್ಲಿ ತೊಂಭತ್ತೊಂಭತ್ತು ಮಂದಿ ರೈಲ್ವೇ ಸ್ಟೇಷನಿನ ಹೋಟೆಲಿಗೆ ಹೋಗಿ ಸಾಯಂಕಾಲದಲ್ಲಿ ಕಳ್ಳು ಕುಡಿಯುತ್ತಾರಯ್ಯಾ."

"ಅಲ್ಲಿ ಕಳ್ಳು ಮಾರಾಟ ಮಾಡುವುದಿಲ್ಲ ನಾಯ್ಕರೇ!"

"ಕಳ್ಳು ಅಲ್ಲದಿದ್ದರೆ ಶರಾಬು. ಅದಲ್ಲದಿದ್ದರೆ ವಿಸ್ಕಿ! ಅಂತೂ ಯಾವು ದಾದರೊಂದನ್ನು ಕುಡಿಯುತ್ತಲೇ ಇರಬೇಕು ಈಗಿನ ಹುಡುಗರಿಗೆ. ಎಂತಹ ಕುಡಿಕತನವಯ್ಯಾ ಇದು!! ಆ ವಿಶ್ವೇಶ್ವರಯ್ಯ—ಆ ಬ್ರಾಹ್ಮಣ—ಆತನ ಮಗ ನಂಜಪ್ಪ ಇದ್ದಾನಲ್ಲ, ಅವನು ಮೊನ್ನೆ ಕುಡಿದು ಕುಡಿದು ಕುಡಿದು.... ........ಪರಮಾತ್ಮಾ, ಏನು ಮಾಡಿದನೆಂದು ಬಲ್ಲಿರಾ?"

"ಏನು?"

"ಒಬ್ಬ ಗಾಡಿಯವನನ್ನು ಕರೆದು, ಮನೆಗೆಂದು ಹೊರಟು, ಬಾಡಿಗೆ ಕೊಡದೆ ಕೆಳಗಿಳಿದು, ನೆಟ್ಟಗೆ ಹೋಗಿ ಒಳ ಹೊಕ್ಕಿ, ಬೆಳಗ್ಗಿನ ತನಕ ನಿದ್ರಿಸಿ ದನಂತೆ!"

"ಅದೇನು ಆಶ್ಚರ್ಯವೇ?"

"ಅಲ್ಲ. ಕೇಳಿ. ಬೆಳಗ್ಗೆ ಎದ್ದು ನೋಡಿದರೆ—ಆ ಮನೆ ಯಾರದು?"

"ಯಾರದು?"

"ಕೊರಂಟೈನ್ ಸ್ವಾಮಿ; ಮುನಿಸಿಪಾಲಿಟಿದ್ದು!"

"ಥೂ, ನಾಚಿಕೆಗೇಡು!"

"ಸ್ವಾಮಿ, ಪಂಡಿತರೇ, ಕುಡಿಯದ ಒಬ್ಬ ಹುಡುಗನನ್ನು ತೋರಿಸಿ ಕೊಡಿ; ದಮ್ಮಯ್ಯ."

"ಗಾಬರಿ ಮಾಡಿದಿರಿ ನಾಯಕರೇ, ನಿಮಗೆ ಇಚ್ಛೆಯಿದ್ದರೆ........... ಕಲ್ಲೂರಿನಲ್ಲಿ ನನ್ನ ಅಳಿಯನೊಬ್ಬನಿದ್ದಾನೆ. ಲೋಯರ್ ಸೆಕೆಂಡರಿ ಪಾಸಾಗಿ ಈಗ ಪಂಡಿತಗಿರಿ ಕಲಿಯುತ್ತಾನೆ."

"ಇರಲಿ ಪಂಡಿತರೇ, ಭೂತದಯಾ ಪರಿಪೂರ್ಣ ಸೇವೆಯದು.

ಅವನು ಕಲಿಯುತ್ತಾ ಇರಲಿ. ಬೇರೆ ಯಾರಾದರೂ ಇದ್ದರೆ ತೋರಿಸಿ ಕೊಡಿ."

ಪಂಡಿತರು ನಾಯಕರ ಆ ಮಾತನ್ನು ಪ್ರಶಂಸೆಯಾಗಿ ಸ್ವೀಕರಿಸಿದರು. "ಚಿಂತೆಯಿಲ್ಲ ನಾಯಕರೇ, ವಿವಾಹದಿಂದ ಅವನ ಶಿಕ್ಷಣಕ್ಕೇನೂ ಹಾನಿ ಯಿಲ್ಲ. ಮದುವೆಯಾದ ಮೇಲೆ ಭಾರೀ ಚುರುಕಾದವರನ್ನು ನಾನು ಕಂಡಿದ್ದೇನೆ" ಎಂದು ಒಂದು ಬಗೆಯ ತ್ಯಾಗಬುದ್ಧಿಯಿಂದ ನುಡಿದರು ಪಂಡಿತರು.

ನಾಯಕರು ಪಂಡಿತರನ್ನು, ಅವರ ವಾಕ್‌ಕುಶಲತೆಗೆ ಮೆಚ್ಚುತ್ತಿದ್ದ ರಲ್ಲದೆ ಮತ್ತಾವ ದೈವಿಕ ಗುಣಕ್ಕೂ ಅಲ್ಲ. ವಿಷಗಳಿಗೆಯಲ್ಲಿ ಊರಿಗೆ ಪಂಡಿತರಾಗಿ ಬಂದ ಇವರು, ತಮ್ಮ ಬಳಿಗೆ ಬಂದವರಿಗೆಲ್ಲ ಒಂದೇ ಬಗೆಯ ಕರಿಯ ಗುಳಿಗೆಗಳನ್ನು ಕೊಟ್ಟು ಅವರೆಲ್ಲ ದೈವವಶಾತ್ (ಅಥವಾ 'ಔಷಧ ವಶಾತ್?') ದೈವಾಧೀನರಾಗಲು, ವಿಷಗುಳಿಗೆಯ ಪಂಡಿತರೆಂದೇ ಊರಿಗೆಲ್ಲ ಭಯಂಕರರೆನಿಸಿದ್ದರು. ನಾಯಕರು ಸ್ವತಹ, ತಮ್ಮ ಮನೆಯಲ್ಲೇನೂ ಚಿಕ್ಕ ಕಾಯಿಲೆಯಾದರೆ, ಈ ಪಂಡಿತರ ದಾಕ್ಷಿಣ್ಯಕ್ಕೆ ಕಟ್ಟುಬೀಳಬಾರದೆಂದು ಕಾಯಿಲೆ ಗುಣವಾಗುವ ವರೆಗೆ ಈ ಪಂಡಿತರು ತಮ್ಮ ಮನೆ ಬಳಿ ಸುಳಿದಾಡ ದಂತೆ ದೇವರೊಡನೆ ಪ್ರಾರ್ಥಿಸಿಕೊಂಡು ಕಳವಳದಲ್ಲಿರುತ್ತಿದ್ದರು. ಇಂತಹ ಪಂಡಿತರ ಕುಟುಂಬದ ಮೇಲೂ ನಾಯಕರಿಗೆ ತಿರಸ್ಕಾರವಿಲ್ಲದಿರಲಿಲ್ಲ.

ಆದರೂ ನಾಯಕರೆಂದರು—ಪಂಡಿತರಿಂದ ತಪ್ಪಿಸಿಕೊಳ್ಳಲೆಂದು: "ಕಲ್ಲೂರು? ಮೇಪಿನಲ್ಲಿ ಎಲ್ಲಿದೆ ಸ್ವಾಮಿ ಆ ಊರು?"

"ಇದೆ. ಕಲ್ಲಿಕೋಟೆಯಿಂದ ಸ್ವಲ್ಪ ಕೆಳಗೆ ಹಳ್ಳಿ."

"ಹಳ್ಳಿ ಬೇಡ ಪಂಡಿತರೇ, ನನ್ನಾಕೆಗೆ ಮಗುವನ್ನು ಹಳ್ಳಿಗೆ ಕಳುಹು ದೆಂದರೆ, ಅಥವಾ ಹಳ್ಳಿಯವನನ್ನು ಇತ್ತ ಕರೆಸುವುದೆಂದರೆ, ಅನ್ಯಾಯವೆಂದು ಕಾಣುತ್ತದೆ. ಒಂದು ಪಟ್ಟಣಬೇಕು ಸ್ವಾಮಿ; ನಮ್ಮೂರಿಗೆ ಹತ್ತಿರ ವಿರಬೇಕು."

"ಹಾಗಾದರೆ ಕಲ್ಲಡ್ಕ........"ಎಂದು ಬಾಯ್ತೆಗೆದರು ಪಂಡಿತರು.

"ಕಲ್ಲೂರು ಮತ್ತು ಕಲ್ಲಡ್ಕ. ಎಲ್ಲವೂ ಕಲ್ಲಿನಿಂದಲೇ ಆರಂಭ ವೇನು ನಿಮ್ಮದು ಪಂಡಿತರೇ? ಕಲ್ಲಡ್ಕವೇನು ಮಹಾ ನಗರವೆ?"

"ಕಲ್ಕತ್ತ..........."

"ನೋಡಿ, ಅದು ಮಹಾನಗರವಾದರೂ ಕಲ್ಲಿನಿಂದಲೇ ಆರಂಭ! ಇರಲಿ ಪಂಡಿತರೇ, ಕಲ್ಕತ್ತದಲ್ಲಿ ಯಾರಿದ್ದಾರೆ?"

"ಸರಿಯಾಗಿ ನೆನಪಿಲ್ಲ. ವಿಚಾರಿಸಿ ಹೇಳುತ್ತೇನೆ. ಹುಡುಗ ನಮ್ಮ ಜಾತಿಯವನೇ. ಏನೋ ಕಲಿಯುತ್ತಿದ್ದಾನೆ."

"ಬಿಡಿ ಪಂಡಿತರೇ ಆ ಯೋಚನೆ. ಬೋಂಬಿನ ಊರು ಅದು. ಒಂದು ಪಿಸ್ತೂಲಿನ ಚಿತ್ರವು ಆ ಹುಡುಗನ ಮೇಜಿನ ಡ್ರಾವರಿನಲ್ಲಿದ್ದರೆ ಆರು ತಿಂಗಳು ಮಹಾಮಾವನ ಮನೆ. ಹಾಗಾದ್ದಲ್ಲಿ ನಮ್ಮಂತಹ ಮಾವನವರ ಗತಿ ಯೇನು?"

"ಉಡುಪಿಯ ಮಹಮ್ಮದ್ ಬಿನ್..........."

"ಏನು ಪಂಡಿತರೇ, ಮಹಮ್ಮದ್ ಬಿನ್....?....?....?....?"

"ಅಲ್ಲ—ಅವರಲ್ಲಿ ಪಾಲಿಗಿರುವ ಕೇಶವಯ್ಯ."

"ಉಸ್" ಎಂದು, ಮಹಾ ಆಪತ್ತಿನಿಂದ ಪಾರಾದ ಒಂದು ನಿಟ್ಟುಸಿರಿಟ್ಟರು ನಾಯಕರು. ಆ ಮೇಲೆ, ಬಳಿಯಲ್ಲಿದ್ದ ಬೀಸಣಿಗೆಯೆತ್ತಿ ಪಟಪಟೆಂದು ಶಬ್ದ ಮಾಡುತ್ತ ವೇಗದಿಂದ ಮೂರು ನಿಮಿಷ ಗಾಳಿ ಹಾಕಿಕೊಳ್ಳುತ್ತ ರಟ್ಟೆಯಲ್ಲಿ ಬಾಸುಂಡೆಯೆದ್ದಿತೆಂದು ತಟಕ್ಕನೆ ಬೀಸಣಿಗೆಯನ್ನು ಬಿಸುಡಿ, ದಳದಳನೆ ಬೆವರಿದರು. ಬೆವರುತ್ತ ಫಕ್ಕನೆ ಎದ್ದು, "ಏಳಿರಿ ಪಂಡಿತರೆ, ಭಾರಿ ಸೆಖೆ! ಮೈದಾನು ಕಡೆಗೆ ಹೋಗುವ. ಗಂಟೆ ಆರಾಯಿತು" ಎಂದರು.

ಮಿನಿಟುಗಳು ಗಂಟೆಯಾಗುತ್ತಿದ್ದುವು. ನಾಯಕ ಮತ್ತು ಪಂಡಿತರ ಹೆಜ್ಜೆಗಳು ಮೈಲುಗಳಾಗುತ್ತಿದ್ದುವು. "ಏಳು ಗಂಟೆಗೆ ಇಬ್ಬರೂ ಮೈದಾನನ್ನು ದಾಟಿ, ರೈಲ್ವೇ ಸ್ಟೇಷನಿನ ಮುಂದೆ ನಿಂತರು. ಇಬ್ಬರಿಗೂ ಆಶ್ಚರ್ಯವಾಯಿತು; ತಾವು ಹೊರಟುದು ಮೈದಾನಿಗೆ, ಬಂದುದು ರೈಲ್ವೇ ಸ್ಟೇಷನಿಗೆ!

"ಪಂಡಿತರೇ, ನಾವು ಮಾತಾಡುತ್ತ ಮೈದಾನನ್ನು ದಾಟಿರಬೇಕು; ದಾಟುವಾಗ ನಮಗೆ ತಿಳಿದೇ ಇಲ್ಲವಾಗಿರಬೇಕು!" ಎಂದು ನಾಯಕರು ತಮ್ಮ ಶೋಧವನ್ನು ಪಂಡಿತರಿಗೆ ತಿಳಿಸಿದರು.

"ಸಂದೇಹವಿಲ್ಲ" ಎಂದು ಅನುಮೋದಿಸಿದರು ಪಂಡಿತರು.

"ಗಾಡಿ ಗೀಡಿ, ಮೋಟಾರು ಗೀಟರು ನಮ್ಮ ಮೇಲಿಂದ ಹಾಯ್ದು ಹೋಗದಿದ್ದುದು ದೊಡ್ಡ ಆಶ್ಚರ್ಯ!'' ಎಂದರು ನಾಯಕರು.

"ಬಹುಶಃ ನಾವು ಅವುಗಳ ಕೆಳಗಿನಿಂದ ಹೋಗಿಲ್ಲವಾಗಿರಬೇಕು'' ಎಂದು ಆ ಕಠಿಣ ಪ್ರಶ್ನೆಗೆ ಉತ್ತರವನ್ನು ಸೂಚಿಸಿದರು ಪಂಡಿತರು.

"ನಾವು ಹೋಗುತ್ತಿರುವಾಗ ಮಾರ್ಕೆಟು ಬಳಿಯಲ್ಲಿ........ಪಂಡಿತರೇ, ಎಂತಹ ಮಾರ್ಗ ಸ್ವಾಮಿ ಅದು! ಡಿಸ್ಗ್ರೇಸ್‌ಫುಲ್!...............ಒಂದು ನಾಯಿ "ಕುಯ್ಕ್'' ಎಂದ ಹಾಗಾಯಿತು. ಅದು ಮೋಟಾರಿನ ಕೆಳಗೆ ಬಿದ್ದುದಲ್ಲದೆ ಹಾಗೆ ಅರಚುವಂತಿಲ್ಲ. ಹಾಗಾದ್ದರಿಂದ, ನಾವು ಮಾರ್ಗ ನಡೆಯುತ್ತಿರುವಾಗ ಮೋಟಾರುಗಳು ಓಡಾಡುತ್ತಲೇ ಇದ್ದುವೆಂಬುದರಲ್ಲಿ ಸಂದೇಹವಿಲ್ಲ'' ಎಂದು, ತನ್ನ ಪತ್ತೇದಾರಿಜ್ಞಾನದ ಸೂಕ್ಷ್ಮದರ್ಶಿತ್ವವನ್ನು ಪ್ರದರ್ಶಿಸಿದರು ನಾಯಕರು.

"ನಾಯಿ ಕೂಗಿದುದಹುದು ನಾಯಕರೇ. ಆದರೆ, ಮೋಟಾರು ಹಾಯಲಿಲ್ಲ. ತಮ್ಮ ಕಾಲು ಅದರ ಹೊಟ್ಟೆಯ ಮೇಲಿದ್ದುದನ್ನು ನೋಡಿದ ಹಾಗೆ ನೆನಪು'' ಎಂದು ಸಂಕೋಚದಿಂದ ಹೇಳಿದರು ಪಂಡಿತರು.

ನಾಯಕರು ಆಶ್ಚರ್ಯದಿಂದ, "ಅಹುದೇ? ಆಗಿರಬಹುದು. ಯಾರಿಗೆ ಗೊತ್ತು! ವರಾನ್ವೇಷಣದ ಚಿಂತೆ ಪಂಡಿತರೇ, ತಲೆಗೆ ಬೇರೊಂದೂ ಹೊಕ್ಕು ವುದಿಲ್ಲ! ಮದುವೆ ಮಾಡುವವನೇ ಬಲ್ಲ'' ಎಂದರು.

"ಅಹುದು ಸ್ವಾಮಿ. ನಾವು ಇನ್ನು ನಿಂತುಕೊಳ್ಳುವುದೇಕೆ? ಇಲ್ಲೇ ಕುಳಿತುಕೊಳ್ಳುವ'' ಎನ್ನುತ್ತ, ಇಬ್ಬರೂ ಸ್ಟೇಷನಿನ ಎದುರಲ್ಲಿರುವ ದಿಬ್ಬದ ಮೇಲೆ ಕುಳಿತರು.

ಮೂರು ನಿಮಿಷದ ಮೇಲೆ ಇಬ್ಬರೂ ಚಿಂತೆಯ ಮುಖಗಳಿಂದ ನೆಲ ವನ್ನು ನೋಡುತ್ತ ಕುಳಿತಿದ್ದರು. ಅಲ್ಲಿಂದ ನಾಯಕರ ದೃಷ್ಟಿಯು ಮೆಲ್ಲನೆ ಆಕಾಶದ ಕಡೆಗೆ ಹೋಯಿತು. ಅಲ್ಲಿ ನಾಯಕರು ಕಂಡರು— ಮತ್ತೇನಿಲ್ಲ, ನಕ್ಷತ್ರಗಳನ್ನು! ಫಕ್ಕನೆ ಅವರಿಗೆ ಭಾವೋದಯವಾಯಿತು. "ಪಂಡಿತರೇ............"

"ಏನು ಸ್ವಾಮಿ?''

"ಪಂಡಿತರೇ, ನನಗೆ ಮಾತೇ ಬರುವುದಿಲ್ಲ!''

ರಪ್ಪೆಂದು ಪಂಡಿತರು ಮೊಣಕಾಲೂರಿ ಮುಂದೆ ಹಾರಿ, ನಾಯಕರನ್ನು ಅಮುಕಿ ಹಿಡಿದು, ಅವರ ತಲೆಯನ್ನು ತಮ್ಮ ಕಾಲುಗಳ ಮೇಲೆ ಬಲಾತ್ಕಾರ ದಿಂದ ಒತ್ತಿ ಇಟ್ಟು, ತನ್ನ ತಲೆಗೆ ಸುತ್ತಿದ ಎಲವಸ್ತ್ರದಿಂದ ಗಾಳಿ ಹಾಕುತ್ತ "ಹೆದರದಿರಿ, ಇದು ಇನ್ನೇನಿಲ್ಲ. ದುಃಖವು ಹೆಚ್ಚಿ, ಆದ ಹೃತ್ಸ್ತಿಕಾರ! ಈಗ ಒಂದು ಸೋಡ ಕುಡಿಯುಬಹುದು. ಆ ಮೇಲೆ ಒಂದು ಚಿಕ್ಕ ಕರಿಯ ಗುಳಿಗೆ ಯನ್ನು ಕೊಡುತ್ತೇನೆ. ಹುಶಾರ್!" ಎಂದು ಮಹಾ ವೇಗದಿಂದ ನುಡಿದರು.

ಮಹಾ ಕಂಗಾಲಾದ ನಾಯಕರು ಪಂಡಿತರ ಹಿಡಿತದಲ್ಲಿ ಚಡಪಡಿಸಿ, ಎದ್ದು, "ಪ ಪಂಡಿತ್ ಅರರೇ, ನೀನೀವ್ಮ್ಮನ್ಮ್ಮವ್........ಏನಿದು........" ಎಂದು ಮೇಲುಸಿರಿನಿಂದ ನುಡಿದು, ಹಿssssಕ್ ಎಂದು ಐದು ಸೀನುಗಳನ್ನು ವಾಯುದೇವನಿಗೆ ದಾನಮಾಡಿ, ಕಣ್ಣುಗಳನ್ನು ಮಂಕನಂತೆ ಹಿಡಿದು ಪಂಡಿ ತರು ಕೈಯಲ್ಲಿ ಹಿಡಿದ ಎಲವಸ್ತ್ರವನ್ನೇ ನೋಡಿದರು.

"ಗುಣವಿದೆಯೇ ಸ್ವಾಮಿ ಈಗ?" ಎಂದು ಕೇಳಿದರು ಪಂಡಿತರು.

ನಾಯಕರು ಉದ್ರೇಕದಿಂದ, "ಏನಾಗಿದೆ ಅಯ್ಯಾ ನನಗೆ? ನಾನು ಆಕಾಶ ನೋಡಿ, ನಕ್ಷತ್ರಗಳ ವಿಷಯವಾಗಿ ಏನೋ ಹೇಳಬೇಕೆಂದಿದ್ದಾಗ ಫಕ್ಕನೆ ನನ್ನನ್ನು ಹಾಗೇಕೆ ಹಿಡಿದಿರಯ್ಯಾ? ಆ ಎಲವಸ್ತ್ರ........ಹೀssssಕ್ ........ಆ ಎಎ........ಹೀssssಕ್........ಲ ವಸ್ತ್ರದಲ್ಲಿ ನಿಮ್ಮ ಮೂಗನ್ನುಜ್ಜಿ ಅಂಟಿದ ನಶ್ಯ ಎಷ್ಟಿ........ಹೀಕ್........ದೆ ಅಯ್ಯಾ!" ಎಂದರು.

"ಅಹುದೇ? ನಾಯಕರೇ, ನಾನೇನೋ ನಿಮಗೆ ಎದೆಗುಂಡಿಗೆಯ ಮಿಸ್ಟಿಕ್ ಎಂದು ಎಣಿಸಿದೆ. ಇರಲಿರಲಿ. ನಕ್ಷತ್ರಗಳ ವಿಷಯವಾಗಿ ಏನು ಹೇಳಬೇಕೆಂದಿದ್ದೀರಿ?"

"ಏನೋ, ಮರೆತುಹೋಯಿತು! ಅದೊಂದು ಬಗೆಯ ಭಾವ; ಮತ್ತು ಅದರ ಉದ್ರೇಕ. ಫಕ್ಕನೆ ಬರುವುದು. ಯಾರಾದರೂ ತಡೆದರೆ ಹೋಯಿತು. ನೀವು ನನ್ನನ್ನು ಕುತ್ತಿಗೆಗೆ ಹಿಡಿದಿರಿ; ಅದು ಹೋಯಿತು. ಆ ಮೇಲೆ ಆ ಹಾಳು ಎಲವಸ್ತ್ರದಿಂದ ಗಾಳಿ ಹಾಕುವಾಗ........"

"ಮೂಗಿನಿಂದ ಹೋಯಿತೇ?"

"ಕಣ್ಣಿನಿಂದಲೂ ಹೋಯಿತು ಸ್ವಾಮೀ........ಹ್ಞಾ ತಡಿಯಿರಿ, ನೆನ ಪಾಯಿತು. ಆ ನಕ್ಷತ್ರಗಳು—ಸ್ವಾಮೀ, ಪಂಡಿತರೇ—ಅವು ಎಷ್ಟು!!!"

"ನೂರು ಕೋಟಿ!"

"ನೂರು ಸಾರಿ ನೂರು ಕೋಟಿ! ಕೋಟಿ ಕೋಟಿ ಸಾರಿ ನೂರು ಕೋಟಿ! ಲೆಕ್ಕವೇ ಇಲ್ಲ. ಆದರೆ; ಒಂದಾದರೂ ಸೂರ್ಯನಿಗೆ ಸಮಾನ ವಿದೆಯೆ!"

"ಸೂರ್ಯನ ಸಾವಿರ ಪಾಲಲ್ಲಿ ಒಂದು ಕೂಡ ಇಲ್ಲ."

"ನಿಜ. ಹಾಗೆಯೇ, ನಮ್ಮೂರಿನಲ್ಲಿ ಲಕ್ಷ ಲಕ್ಷ ಹುಡುಗರಿರುವರು. ಆದರೆ, ಕುಂಬಳೆ ವೆಂಕಟ ಜೋಯಿಸರ ಮಗನಂಥಾ ಮಗನಿಲ್ಲ ಸ್ವಾಮಿ!"

"ಹಾಗಾದರೆ ಇಷ್ಟು ಗೊಂದಲವೇಕೆ? ಅವನಿಗೇ ಹುಡುಗಿಯನ್ನೊಪ್ಪಿಸ ಬಹುದಲ್ಲ?"

ನಾಯಕರ ಮುಖವು ದುಃಖದಿಂದ ಮುದುಡಿಕೊಂಡಿತು. "ಪಂಡಿತರೇ, ದೈವೇಚ್ಛೆ. ಹುಡುಗನು ೧೫ನೇ ವಯಸ್ಸಿನಲ್ಲಿ ಕಾಲವಾದನು. ಭಾರೀ ಬುದ್ಧಿವಂತ ಹುಡುಗ ಸ್ವಾಮಿ. ಒಮ್ಮೆ ಅವರ ಮನೆಯಾಳು ಮಹಡಿ ಯಿಂದ ಕೆಳಗೆ ಬಿದ್ದು ಸತ್ತಾಗ ಆ ಹುಡುಗನು ಹೇಳಿದ ಒಂದೇ ಒಂದು ಮಾತು—"ಅಪ್ಪಾ, ಅವನನ್ನು ಆಸ್ಪತ್ರೆಗೊಯ್ಯಬಾರದೇ?"—ಎಂತಹ ಹೃದಯ ಸ್ವಾಮಿ! ಅದಾದ ಕೆಲವೇ ತಿಂಗಳಲ್ಲಿ ಅತಿಸಾರದಿಂದ ಹುಡುಗ—ಂ! ಸ್ವಾಮಿ, ಪಂಡಿತರೇ, ಇಲ್ಲ, ಅಂಥಾ ಹುಡುಗ ಇನ್ನಿಲ್ಲ!"

"ಬುದ್ಧಿವಂತರು ಬೇಗ ಸಾಯಬೇಕೆಂದೇ ದೇವರ ಇಚ್ಛೆ ಸ್ವಾಮಿ! ನಮ್ಮಣ್ಣನ ಮಗ........"

"ಸಾಕು ಪಂಡಿತರೇ! ಕಳವಳವಾಗುತ್ತದೆ. ಸತ್ತವರ ಸುದ್ದಿ ಇನ್ನು ತೆಗಿಯಬೇಡಿ. ಇನ್ನು ಒಳ್ಳೇ ಹುಡುಗರು ಯಾರಿದ್ದಾರೆಯೋ ನೆನಪು ಮಾಡಿರಿ. ಹುಡುಗಿಯರು ಸ್ವಾಮಿ, ನೋಡಿ, ಎಷ್ಟೆಂದರೂ ಅಬಲೆಯರು ಹುಡುಗಿಯರನ್ನು........"

"ನಾಯಕರೇ, ನೋಡಿ, ನೀವು ಹೇಳಿದ ಹಾಗೆಯೇ, ಸ್ಟೇಷನಿನಲ್ಲಿ ವಿಸ್ಕಿಯೋ ಬೀರೋ........" ಎಂದು ಆಕಸ್ಮಿಕವಾಗಿ, ರೈಲ್ವೇ ಸ್ಟೇಷನಿನ ಕಡೆಗೆ ಬೆರಳು ಮಾಡಿ ತೋರಿಸಿದರು ಪಂಡಿತರು.

ನಾಯಕರು ನೋಡಿದರು:—ಏನನ್ನು? ತಲೆಕೂದಲು ಹುಡುಗರಂತೆ 'ಕ್ರೋಪ್' ರೂಪಕ್ಕೆ ಪರಿವರ್ತಿತವಾದ ಮುಖದ; ಒಂದು ಕೈಯಲ್ಲಿ ಬೇಡ್

ವಿಂಟನ್ ಬೇಟನ್ನು ಹಿಡಿದು, ಮತ್ತೊಂದರಲ್ಲಿ ಒಂದು ಪತ್ರಿಕೆಯನ್ನು ಹಿಡಿದು ಹೊರಗೆ ಬರುತ್ತಿರುವ ವ್ಯಕ್ತಿಯೊಂದು! 'ಯಾರದು?' ಎಂದು ಮೆಲ್ಲನೆ ಕೇಳಿದರು ನಾಯಕರು.

'ಯಾರೋ!' ಎಂದರು ಪಂಡಿತರು.

'ಗೊತ್ತಿಲ್ಲ!'

ಅಷ್ಟರಲ್ಲಿ ವ್ಯಕ್ತಿ ಹೊರಗಿನ ದೀಪದ ಪ್ರಕಾಶದ ಕೆಳಗೆ ಬಂತು. ನಾಯಕರು ಸರಿಯಾಗಿ ನೋಡಿದರು. ವ್ಯಕ್ತಿಯ ಮುಖ ಗಂಡಸಿನ ಹಾಗೆ ಇದೆ! ಆದರೆ, ಸೀರೆ ಉಟ್ಟುಕೊಂಡಂತಿದೆ. ಸಂದೇಹದಿಂದ ನಾಯಕರು, 'ಪಂಡಿತರೆ, ಹೋಗಿ ಮೆಲ್ಲನೆ ವಿಚಾರಿಸಿರಿ,—ರೈಲು ಎಷ್ಟು ಗಂಟೆಗೆ ಬರುವುದೆಂದು!' ಎಂದರು.

ಪಂಡಿತರು ಕೆಳಗಿಳಿದು ವ್ಯಕ್ತಿಯನ್ನೆದುರಿಸಿದರು. ನೋಡಿದರು. ವ್ಯಕ್ತಿಯು ಪಂಡಿತರನ್ನು ನೋಡುತ್ತಲೇ ಸರಸರನೆ ಹೋಗಿಬಿಟ್ಟಿತು.

ಪಂಡಿತರು ಓಡುತ್ತೋಡುತ್ತ ನಾಯಕರ ಬಳಿಗೆ ಬಂದು, ಮೇಲುಬ್ಬಸದಿಂದ, 'ಸ್ವಾಮಿ......ತಮ್ಮ.......'ಎಂದು ತೊದಲ್ನುಡಿದರು.

ನಾಯಕರು ಗಾಬರಿಯಿಂದಲೂ ಆತುರದಿಂದಲೂ 'ಏನು, ಏನು? ಹೇಳಿರಿ ಬೇಗ!' ಎಂದು ಪಂಡಿತರ ಕೈಯನ್ನು ಗಟ್ಟಿಯಾಗಿ ಹಿಡಿದು ಕೇಳಿದರು.

'ತಮ್ಮ ತಮ್ಮ......'

'ಹೇಳಿರಿ! ಯಾರು? ನನ್ನ ಮಗನೇ?'

'ಅಲ್ಲ, ನಿಮ್ಮ ಮಗಳು!'

'ಪರಮಾತ್ಮಾ!' ಎನ್ನುತ್ತ ಪಂಡಿತರ ಮಣಿಗಂಟಿನ ಹಿಡಿತವನ್ನು ಬಿಟ್ಟುಕೊಟ್ಟು ನಾಯಕರು, ಕುಳಿತಲ್ಲೇ ಒರಗಿದರು.

'ನಾರಾಯಣಾ, ಭಗವಂತಾ! ಏನಿದು ನಾಯಕರೇ? ಏಳಿರಿ! ಗಾಬರಿ ಮಾಡಬೇಡಿ! ಹುಶಾರ್! ಕಪ್ಪುಗುಳಿಗೆ!' ಎಂದು ಗಲಾಟೆ ಮಾಡಿದರು ಪಂಡಿತರು.

'ಕಪ್ಪು ಗುಳಿಗೆ' ಎಂದು ಕೇಳುತ್ತಲೇ, ನಾಯಕರ ಸಂಕಟವೆಲ್ಲ ನೀಗಿ, ನೆಟ್ಟಗಾಗಿ ಎದ್ದು ನಿಂತು, 'ಬಿಡಿರಿ ಹೋಗಲಿ! ನಿಮ್ಮ ಗುಳಿಗೆಯನ್ನು ನೀವೇ

ತಿನ್ನಿ. ಲೋಕಕ್ಕೆ ಉಪಕಾರವಾದೀತು!' ಎಂದು ಪಂಡಿತರನ್ನು ಶಪಿಸುತ್ತ ನಾಯಕರು ಹುಚ್ಚನಂತೆ ಸಟಸಟನೆ ಹೊರಟು ಹೋದರು.

ಆ ಕತ್ತಲೆಯಲ್ಲಿ ಅವಾಕ್ಕಾಗಿ ಕುಳಿತ ಪಂಡಿತರು ಐದು ನಿಮಿಷ ಮಾತಿಲ್ಲದೆ, ಬಾಯಿಬಿಟ್ಟು ನೋಡುತ್ತ, ಕೊನೆಗೆ ಎದ್ದು ನಿಂತು, 'ಬೇಕಾದುದು ಒಳ್ಳೆಯ ಹುಡುಗನಲ್ಲ, ಒಳ್ಳೆಯ ಹುಡುಗಿ! ಈ ಹುಡುಗಿಗೆ ಹುಡುಕಬೇಕಾದುದು ಗಂಡನಲ್ಲ, ಹೆಂಡತಿಯನ್ನು! ಹಿಂದೂ ಹುಡುಗಿಯರು ತಲೆ ಕತ್ತರಿಸಿ ಇಷ್ಟಕ್ಕೆ ಬರುವರೆಂದು ಮಾತ್ರ ನಾನೆಣಿಸಿರಲಿಲ್ಲ!' ಎನ್ನುತ್ತ, ತನ್ನ ಗುಳಿಗೆಗಳಿಗೆ ಮಾಡಿದ ಅಪಮಾನವನ್ನು ನೆನೆದೂ ಸಂತಾಪಗೊಂಡು, ತಮ್ಮ ಮನೆ ಕಡೆಗೆ ತೆರಳಿದರು.

---

# ೧೦. ಘಟಿಂಗರು

ರೈಲ್ವೆ ಸ್ಟೇಷನಿನಲ್ಲಿ ಜನರ ನುಗ್ಗಾಟವು ಹೆಚ್ಚಿಲ್ಲದಿದ್ದರೂ ಒಬ್ಬ ಪ್ರಾಮಾಣಿಕ ಪೋರ್ಟರನು ನನಗೆ ಟಿಕೇಟು ತೆಗೆಸಿ ಕೊಡುವೆನೆಂದು ಭಾಷೆಯಿತ್ತು, ತೆಗೆಸಿಕೊಟ್ಟನು. ನಾನು ಹಣಕೊಟ್ಟೆ. ಪೋರ್ಟರನು ನಾನು ಕೊಟ್ಟ ಎರಡಾಣೆ ಇನಾಮನ್ನು ಕಿಸೆಗೆ ಹಾಕಿ, "ಮೂರು ದಿನದಿಂದ ಊಟವಿರಲಿಲ್ಲ" ಎಂದನು. ಅವನು ಸುಳ್ಳು ಹೇಳಿದುದಕ್ಕೆ ಅವನಿಗೆ ಮತ್ತೊಂದಾಣೆ ಕೊಟ್ಟು ಪ್ಲಾಟ್‌ಫೋರ್ಮಿಗೆ ಹೋಗಿ ಬಂಡಿಯಲ್ಲಿ ಕುಳಿತೆ.

"ಬಿಸ್ಕಿಟ್ ಬಿಸ್ಕಿಟ್" ಎಂದು ಬಿಸ್ಕಿಟನವನು ಕೂಗಿದನು. ಬಿಸ್ಕೂಟು ಸುಳ್ಳಿರಲಾರದೆಂದು, ಅವನನ್ನು ಕರೆದು, ಕರ್ರಗಿನ ಒಂದು ಬಿಸ್ಕಿಟಗೆ ಬೊಟ್ಟು ತೋರಿಸಿ, "ಅದೇನು?" ಎಂದೆ.

"ಬೆಣ್ಣೆಯ ಬಿಸ್ಕಿಟು; ಬೆಣ್ಣೆ ಮತ್ತು ಗೋದಿ ಹಿಟ್ಟು ಮಾತ್ರ!" ಎನ್ನುತ್ತ ಎರಡಾಣೆಗೆ ಮೂರು ಬಿಸ್ಕಿಟುಗಳನ್ನು ನನಗೆ ಮಾರಾಟಮಾಡಿ ಹೋದನು. ಬಂಡಿ ಹೊರಟಿತು. ಬಿಸ್ಕಿಟನ್ನು ಮುರಿದಾಗ ಕಾಡು ಹಂದಿಯ ತುಪ್ಪದ ವಾಸನೆ ಹೊರಟಿತು, ಮಣ್ಣೂ ಇತ್ತು. "ಇದರಲ್ಲಿ ಬೆಣ್ಣೆ ಮತ್ತು

ಗೋದಿ ಹಿಟ್ಟಲ್ಲದೆ ಕಾಡು ಹಂದಿಯ ತುಪ್ಪವೂ ಕಾರ್ಖಾನೆಯ ಮಣ್ಣೂ ಇದೆ" ಎನ್ನಬಾರದಿತ್ತೇಕೆ ಎಂದುಕೊಳ್ಳುತ್ತ ಬಿಸ್ಕಿಟನ್ನು ರೈಲಿನಿಂದ ಬಿಸುಡಿ, ಕಣ್ಣು ಮುಚ್ಚಿದೆ.

ಬಂಡಿಯಲ್ಲಿ ಯಾರೂ ಮಾತಾಡುತ್ತಿರಲಿಲ್ಲ. ಎಲ್ಲರೂ ಮೊದಲೇ ನಿರ್ಣಯಿಸಿ ಮೌನ ಹಿಡಿದವರಂತೆ ಇದ್ದರು. ನನ್ನೆದುರಲ್ಲಿರುವ ಮಲೆಯಾಳಿಯೊಬ್ಬನು ನನ್ನ ಭುಜಕ್ಕೆ ಒಂದು ಬೆರಳನ್ನು ಕುಟ್ಟಿ ಬೆಂಕಿಪೆಟ್ಟಿಗೆ ಕೇಳಿದನು. ಕೊಟ್ಟೆ. ಒಂದಂಗುಲ ಮಾತ್ರ ಉದ್ದವಿರುವ ಒಂದು ಚುಟ್ಟವನ್ನು ಎಳೆದು, ಅದರಿಂದ ಅತಿಕೆಟ್ಟ ವಾಸನೆ ಹೊರಡಿಸಿ, ಆ ಮಲೆಯಾಳಿಯು ನನ್ನ ಸಂತೋಷವನ್ನೆಲ್ಲ ತೆಗೆದು, ಅಪಕಾರ ಮಾಡಿದನು.

"ನನ್ನ ಅಜ್ಜಿಗೆ ಸರ್ಪಗಳನ್ನು ಕರೆದು, ಹಾಲುಕೊಟ್ಟು ಕಳುಹಿಸುವ ಸಾಮರ್ಥ್ಯವಿತ್ತು" ಎಂದಾರೋ ಹೇಳಿದಂತೆ ಕೇಳಿಸಿತು. ಓರ್ವ ತರುಣಿಯು ತನ್ನ ಗೆಳತಿಯೊಡನೆ ಕಥೆಯಾರಂಭಿಸಿದ್ದಳು.

"ನನ್ನ ಅಕ್ಕನ ಅತ್ತೆಯು ಹಾವನ್ನು ಕಂಡಕೂಡಲೇ ಒಂದು ಮಂತ್ರ ಉಚ್ಚರಿಸುವಳು; ಹಾವು ಹೊರಟು ಹೋಗುವುದು"—ಎಂದು ಆ ಗೆಳತಿ ಒಂದು ಸುಳ್ಳಿಗೆ ಕಾಲು ಸುಳ್ಳು ಬೆರಕೆ ಮಾಡಿ ಹೇಳಿ, ಮುಯ್ಯಿ ತೀರಿಸಿಕೊಂಡಳು.

"ಸೀತಾದೇವಿಯು ಕುಳಿತಲ್ಲಿಂದ ಇನ್ನೂ ರಾಮ, ರಾಮ ಎಂಬ ಶಬ್ದ ಕೇಳಿಬರುತ್ತದೆ" ಎಂದು ಸಿಲೋನಿಗೆ ಹೋಗಿ ಸುರಕ್ಷಿತವಾಗಿ ಮರಳಿದ ಒಬ್ಬನು, ಮೀಸೆ ತಿರುವುತ್ತ ಸುಳ್ಳು ಹೇಳಿದನು.

"ಅಯೋಧ್ಯೆಯಲ್ಲಿ ಹನುಮಂತನು ಇನ್ನೂ ಇರುವನು, ನಾನು ಅವನನ್ನು ಕಂಡೆ. ನಮಸ್ಕರಿಸುವಷ್ಟರಲ್ಲಿ ರಾಮಾ ಎಂಬ ಕೂಗಿನಿಂದ ಆತನು ಮಾಯ!" ಎಂದು ಮತ್ತೋರ್ವ ಮೀಸೆಯವನು ಅಖಂಡ ಸುಳ್ಳು ಹೇಳಿ, ತನ್ನೆದುರಿಗಿರುವವನನ್ನು "ಹೇಗೆ? ಇದಕ್ಕಿಂತ ದೊಡ್ಡ ಸುಳ್ಳನ್ನು ನೀನು ಹೇಳಿದರೆ ನೂರು ರೂಪಾಯಿ ಇನಾಂ!" ಎಂಬ ಚರ್ಯೆಯಿಂದ ನೋಡಿದನು.

"ಕಲ್ಕತ್ತದಲ್ಲಿ ನಾನು ಒಂದು ದಿನ ಬದುಕಿದ್ದೇ ಕಷ್ಟ!" ಎಂದೋರ್ವ ಪೇಟಾದವನು ಉಚ್ಚ ಸ್ವರದಲ್ಲಿ ಕೂಗಿದನು. ಕಲ್ಕತ್ತದಲ್ಲಿ ಬದುಕಿದ್ದು ಕಷ್ಟ

ವಾದರೆ, ಈಗ ಬಂಡಿಯಲ್ಲಿ ಖಂಡಿತ ಸಾಯುವೆನೆಂಬ ಸ್ವರವೆಂದು ಆರು ಮಂದಿ ಸುಳ್ಳುಗಾರರು ಅವನ ಕಡೆಗೆ ನೋಡಿದರು. ಅದರಲ್ಲಿ, ಅತಿ ಕ್ಷೀಣ ಸ್ವರದ, ಅತಿ ಚಿಕ್ಕ ದೇಹದ ಮುದುಕನೊಬ್ಬನು "ಯಾಕೆ ಕಷ್ಟ?" ಎಂದು ಪ್ರಶ್ನಿಸಿದನು.

"ನಾನು ಹೌರಾ ಸಂಕದ ಮೇಲಿಂದ ಹೋಗಬಾರದೆಂದರು."

"ನೀವು ಹೋದಿರಿ; ನಿಮಗೆ ಗುಂಡುಹೊಡೆದರು?"—ಚಿಕ್ಕ ಜೀವಿಯ ಪ್ರಶ್ನೆ.

"ಅಲ್ಲ. ಯಾರೂ ಹೋಗಬಾರದೆಂದರೂ, ನಾನು ಹೋದೆ. ಸಂಕವನ್ನು ತೆಗೆಯುತ್ತಿದ್ದರು. ಹೊಸ ಸಂಕದ ಕೆಲಸ ನಡೆಯಬೇಕಾಗಿತ್ತು. ನಾನು ಅರ್ಧದಲ್ಲೆ ಇದ್ದೆ. ನಾನು ಕಾಲಿಟ್ಟಲ್ಲಿ ಸಂಕದ ತೊಲೆಗಳು ಜಾರಿದುವು. ಬಹು ಭಾರದ ತೊಲೆಗಳ ಸಹಿತ ನಾನು ನದಿಗೆ; ನನ್ನ ಮೇಲೆ ಕೆಲವು ಟನ್ ಕಬ್ಬಿಣ! ನಾನು ಹೇಗೆ ಎದ್ದೆ?"—ಹಾಗೆಂದು ಪ್ರಶ್ನಿಸುತ್ತ ಜಟ್ಟಿಯು ತನ್ನ ಸುತ್ತುಮುತ್ತಲಿನವರನ್ನೆಲ್ಲ ಸ್ಥಿರದೃಷ್ಟಿಯಿಂದ ನೋಡುತ್ತ, "ಅದನ್ನು ಕೇಳಿ ತಲೆದೂಗಲು ಮಾತ್ರ ನೀವು ಶಕ್ತರು; ಹೇಳುವ ಅಧಿಕಾರ ನಿಮಗಿಲ್ಲ" ಎಂಬಂತೆ ವಿಜಯದ ಜ್ವಾಲೆಗಳನ್ನು ಹೊರಡಿಸಿದನು.

"ನೀವು ಎದ್ದದ್ದು ಅಹುದೇ?" ಎಂದು, ಕ್ರೂಜೆಯ ಗುರುತಿನ ಮುಂಡಾಸಿನವನೊಬ್ಬನು ಪ್ರಶ್ನಿಸಿದನು. ಅವನು ಮೈಸೂರು ಪ್ರಾಂತ್ಯದವನೆಂದು ಮುಂಡಾಸೂ, ಪ್ರಾಕ್ಟಿಸ್ ಇಲ್ಲದವನೆಂದು ಹರಕು ಕೋಟೂ ಹೇಳುತಿದ್ದುವು.

ಜಟ್ಟಿಯು ಅವನನ್ನೇ ದುರದುರನೆ ನೋಡಿ, "ಬಿದ್ದುದು ಅಹುದಾದರೆ ಎದ್ದದ್ದೂ ಅಹುದು!" ಎನ್ನುತ್ತ, ಇದಕ್ಕಿಂತ ಚತುರವಾದ ಉಕ್ತಿ ಮತ್ತಾವುದೂ ಇಲ್ಲವೆಂದು ನನ್ನ ಕಡೆಗೆ ಅನುಮೋದನೆಗಾಗಿ ನೋಡಿದನು. ನಾನು ತುಸು ನಕ್ಕೆ.

"ದಾಖಲೆ?"—ಲಾಯರ್ ಕೇಳಿದನು.

"ದಾಖಲೆ—ನಾನೀಗ ಸಜೀವನಾಗಿರುವುದೇ!"—ಜಟ್ಟಿಯ ಉತ್ತರ.

"ಬಿದ್ದ ದಾಖಲೆ?"—ಲಾಯರಿನ ಪ್ರಶ್ನೆ.

ಜಟ್ಟಿಗೆ ರೇಗಿತು. "ನಿಮಗೀಗ ನಾನೊಂದು ಗುದ್ದು ಕೊಟ್ಟರೆ ಅದಕ್ಕೆ ದಾಖಲೆ?"—ಜಟ್ಟಿಯ ರೋಷಾವೇಶದ ಪ್ರಶ್ನೆ.

ಲಾಯರ್ ಮಾತಾಡಲಿಲ್ಲ. ಗುದ್ದು ಬಿದ್ದಲ್ಲಿ ಮೂಳೆ ಮುರಿದುದೇ ದಾಖಲೆಯಾಗುವುದೆಂದು ಅವರಿಗೆ ಗೊತ್ತು. "ಏನ್ರೀ—ನಾನೇನೂ ಕ್ರಮ ತಪ್ಪಿ ಮಾತಾಡಿಲ್ಲ" ಎನ್ನುತ್ತ ಲಾಯರು, ನನ್ನನ್ನು ನ್ಯಾಯಾಧೀಶನನ್ನಾಗಿ ಮಾಡಿ ಸುಮ್ಮಗಾದರು. ಜಟ್ಟಿ ಆ ಮೇಲೆ ಮಾತಾಡಲಿಲ್ಲ.

ಇವರೆಲ್ಲರೂ ಸುಳ್ಳೇಕೆ ಹೇಳುವರೆಂದು ನನ್ನಲ್ಲೊಂದು ಪ್ರಶ್ನೆ. ಏನು ಲಾಭ? ಏನೋ ಇರಬೇಕು.

ನಾನೂ ಸುಳ್ಳು ಹೇಳಬೇಕೆಂದು ಆಸೆಯಾಯಿತು. "ನೀವೆಲ್ಲ ಕೇಳಿರು ವಿರೇ?" ಎಂದೆ.

"ಇಲ್ಲ. ಏನು?" ಎಂದು ಸಾಲ್ಕೈದು ಕಂಠಗಳು ಏಕಕಾಲದಲ್ಲಿ ಪ್ರಶ್ನಿಸಿದುವು.

"ನಾನೊಂದು ದಿನ ರಾಮೇಶ್ವರದಿಂದ ರೈಲಿನಲ್ಲಿ ಬರುವಾಗ, ಬಂಡಿ ಯಲ್ಲೊಬ್ಬನೇ ಇದ್ದೆ. ನಡುರಾತ್ರೆ ನಾನು ಕಣ್ಣು ಬಿಡುತ್ತೇನೆ; ರೈಲಿನೊಳಗೆ ಒಬ್ಬ ರಾಕ್ಷಸನು ಒಂದು ಬೆರಳು ಹಾಕಿ ಬಂಡಿಯೊಂದಿಗೇ ಓಡಿಬರು ತ್ತಿದ್ದನು."

"ಹೂ........ಙ್!"

"ಆ ಬೆರಳು ಎಷ್ಟು ದೊಡ್ಡದು ಗೊತ್ತೆ? ಅವನಿಂದ ಇನ್ನೊಂದು ಬೆರ ಳನ್ನು ಅದೇ ಕಿಟಕಿಯಿಂದ ಒಳಗೆ ತಳ್ಳಲು ಸ್ಥಳ ಸಾಲದಿತ್ತು!"

"ಹೂ........ಙ್"!

"ಇನ್ನೊಂದು ನಿಮಿಷ ಕಳೆದರೆ ಆ ರಾಕ್ಷಸನು ರೈಲನ್ನು ಆ ಒಂದೇ ಬೆರಳಿಂದ ಎಳೆದುಹಾಕುತ್ತಿದ್ದನು.''

"ಹೂ........ಙ್!"

"ನಾನೇನು ಮಾಡಿದೆ ಗೊತ್ತೆ?........?

"ನಿಲ್ಲಿ. ನಾನು ಏಳು ವರ್ಷಗಳ ಹಿಂದೆ ಗೋದಾವರಿ ಸಂಕದ ಮೇಲೆ........"ಎಂದು ಚಿಕ್ಕ ಜೀವಿಯು ಒಂದು ಸುಳ್ಳನ್ನೆತ್ತಿತು.

"....ನೇತಾಡಿದೆ ಅಲ್ಲವೇ? ಸಾಕು ಮಾಡಪ್ಪ ನಿನ್ನ ಸುಳ್ಳು. ನನ್ನ

ಕತೆ ಕೇಳು!"—ಎಂದು ಮುದುಕನ ಮೇಲೆ ಸೇಡು ತೀರಿಸಿಕೊಂಡು ನಾನು ಮುಂದರಿಸಿದೆ. "ನಾನೇನು ಮಾಡಿದೆ ಗೊತ್ತೇ? ನನ್ನ ಬಳಿಯಲ್ಲೊಂದು ಚೂರಿಯಿತ್ತು. ರಾಕ್ಷಸನ ಬೆರಳನ್ನು ಕಡಿದೆ. ಅತಿ ಭಯಂಕರ ಶಬ್ದ ಮಾಡುತ್ತ ರಾಕ್ಷಸನು ಬಿದ್ದುಬಿಟ್ಟನು. ಬೆರಳು ಬಂಡಿಯೊಳಗೆ ಬಿತ್ತು!"

"ಹೊ........ಖ್! ಆ ಬೆರಳೇನಾಯಿತು?"—ಎಲ್ಲರೂ ಕೇಳಿದರು.

"ನನ್ನ ಶಾಲೆಯ ಮ್ಯೂಝಿಯಮಿಗೆ ಕೊಟ್ಟಿದ್ದೇನೆ. ಈಗಲೂ ಅಲ್ಲಿದೆ. ಯಾರೂ ನೋಡಬಹುದು. ವಿಳಾಸ ಬೇಕೇ?—ಕುಪ್ಪಣ್ಣ ಹೈಸ್ಕೂಲು, ಏಳೂರು."

ರೈಲು ಕಾಸರಗೋಡಿಗೆ ತಲುಪಿತು. ನಾನು ಕೆಳಗಿಳಿದೆ. ಯಾರೋ ನನ್ನ ಬೆನ್ನು ತಟ್ಟಿದರು. "ಒಳ್ಳೆದನ್ನೇ ಮಾಡಿದೆ!" ಎಂದರು. ನೋಡಿದೆ. ನನ್ನ ಹಳೇ ಉಪಾಧ್ಯಾಯರು. (ಅವರೂ ನನ್ನ ಬಂಡಿಯಲ್ಲಿದ್ದುದನ್ನು ನಾನು ನೋಡಿರಲಿಲ್ಲ.)

ನಾನೇನೂ ನಾಚಿಕೆ ಪಡಲಿಲ್ಲ. "ಆದರೆ, ಇತರರ ಸುಳ್ಳಿಗಿಂತ ನನ್ನ ಸುಳ್ಳು........"ಎಂದು ಬಾಯ್ತೆಗೆದೆ.

"ನೀನೊಂದು ರತ್ನ. ದೊಡ್ಡ ಒಡವೆ. ನಾನು ನಿನ್ನ ಉಪಾಧ್ಯಾಯನಾದುದಕ್ಕೆ ಸಾರ್ಥಕ!" ಎಂದರು.

"ಗುರುವಿನ ಆಶೀರ್ವಾದ ಇದ್ದರೆ ಜಗತ್ತನ್ನೇ ಗೆದ್ದೇನು!" ಎಂದೆ.

"ಈಗಲೇ ಗೆದ್ದಿರುವೆ. ಇನ್ನು ಆಳುವ ಕೆಲಸ ಮಾತ್ರ. ಆಗ ಮಾತ್ರ ಜಾಗರೂಕತೆ" ಎಂದರು.

"ಎಲ್ಲ ಗುರುಪ್ರಸಾದ!" ಎಂದು ಗುರುಗಳಿಗೆ ತಲೆವಾಗಿ, ಗುರುಗಳು ಮೊದಲು ಎಷ್ಟು ಸುಳ್ಳು ಹೇಳುತಿದ್ದರು ಎಂದಾಲೋಚಿಸುತ್ತ ನಡೆದೆ.

---

## ೧೧. "ಸರ್ವಂ ಕಾವ್ಯಮಯಂ ಜಗತ್"

ಕವಿಗಳು ಹುಟ್ಟುವರು ಎಂದು ನಾನು ಕೇಳಿದ್ದೇನೆ. ನಿಜ. ಸಂದೇಹ ವಿದ್ದವರಿಗೆ, ಸರಕಾರದವರು ಇರಿಸಿದ ಜನನ ರಿಜಿಸ್ಟ್ರಿಗಳೇ ನಿರ್ವಿವಾದವಾದ ದಾಖಲೆ.

ಸಿದ್ದಣ್ಣನು ಕವಿಯೆಂದು, ಅವನೇ ಒಂದು ದಿನ ನನಗೆ ಹೇಳಿದಾಗ ತಿಳಿಯಿತು. ಈ ವಾರ್ತೆಯು ಆಶ್ಚರ್ಯವನ್ನೂ ಉಂಟುಮಾಡಿತು. ಒಂದು ಚಿಕ್ಕ ಅಂಗಿಯನ್ನು ಹಾಕಿ, ಎಲ್ಲರಂತೆ ಪೇಟೆಯಲ್ಲಿ ಅಲೆದಾಡುತ್ತ, ಎಲ್ಲರಂತೆ ಹೊಟೇಲುಗಳಿಗೆ ನುಗ್ಗುತ್ತ, ಎಲ್ಲರಂತೆ ನಗುತ್ತ, ಎಲ್ಲರಂತೆ ನಗುವಿಲ್ಲದಿದ್ದಾಗ ನಗದಿರುತ್ತ, ಎಲ್ಲರಂತೆ ಅಂಗಾಂಗಗಳುಳ್ಳವರು "ಕವಿ" ಯೆಂದು ನಾನೆಣಿಸಿರಲಿಲ್ಲ. ಸಿದ್ದಣ್ಣನು ನಮ್ಮಂತೇ ಸಾಮಾನ್ಯ "ಸ್ಥೂಲ ಪ್ರಪಂಚ"ದಲ್ಲಿನ ಒಂದು ಪ್ರಾಣಿ ಎಂದೇ ತಿಳಿದಿದ್ದೆ. ಕವಿ ಎಂಬುದು ನನಗೊಂದು ಸುದ್ದಿಯೇ.

ಆತನ ಪರಿಚಯು ನನಗೆ ಬಹು ಕಾಲದಿಂದಿತ್ತು. ಒಂದು ದಿನ ಲಕ್ಷ್ಮೀಶನ ಮಾತು ಬಂದಾಗ,—"ಎಲ್ಲವೂ ಶಬ್ದಾಡಂಬರ. ಚಾಪ-ಚೂಪ ಎಂದು ಶಬ್ದಗಳನ್ನು ಪೋಣಿಸಿದ್ದಾನೆ; ಅಷ್ಟೆ" ಎಂದನು.

ಲಕ್ಷ್ಮೀಶನ ಭಕ್ತನಾದ ನಾನು ವಿಸ್ಮಯಪಟ್ಟು,—"ಅಷ್ಟೆ?" ಎಂದು ಕೇಳಿದೆ.

"ಅಷ್ಟೆ; ಅದಕ್ಕಿಂತ ಹೆಚ್ಚೂ ಇಲ್ಲ, ಕಡಿಮೆಯೂ ಇಲ್ಲ"ವೆಂದನು.

ನನಗೆ ಲಕ್ಷದ ಗಂಟು ಮುಳುಗಿದಂತಾಯಿತು. (ಒಂದು ವಿಚಿತ್ರ ಅನುಭವ; "ಲಕ್ಷ"ವಿಲ್ಲದಿದ್ದಾಗಲೇ ಬರುವುದು.) "ಆ ದೃಶ್ಯ,—ಸೀತಾ ದೇವಿಯನ್ನು ಲಕ್ಷ್ಮಣನು ಕಾಡಿಗೆ ಬಿಟ್ಟುಬಂದಾಗ ಆಕೆಯು ಗೋಳಿಡುವ ದೃಶ್ಯ?"

"ಶುದ್ಧ ಅಸ್ವಾಭಾವಿಕ! ಮನುಷ್ಯರು ಮರಗಳೊಡನೆ ಬೇಡಿ ಕೊಳ್ಳುವುದೇ?"

"ಕುದುರೆಯನ್ನು ಕವಿಗೆ ಹೋಲಿಸಿದುದೋ?" ಆತುರದಿಂದ ಪ್ರಶ್ನಿಸಿದೆ.

"ಕವಿಯನ್ನು ಕುದುರೆಗೆ ಹೋಲಿಸುವಷ್ಟೆ ಅನ್ಯಾಯ!"

"ಹೋಲಿಸಬಾರದೇ?"—ದಂಗೆ ಎದ್ದೆ ನಾನು.

"ಬಹುದಣ್ಣ. ಆದರೆ, ಭಾವವಿರಬೇಕು; ಬಹು ಆಳವಾದ ಅರ್ಥ ವಿರಬೇಕು. ಅದನ್ನು ಬಿಟ್ಟು,—ಕುದುರೆ ಹಜ್ಜೆ ಇಡುವಾಗ ಕವಿಯು ಪದ ರಚನೆಯು ನೆನಪಾಯಿತೆಂದು ಹರಟಿದರೆ........! ಹಳೆ ಕವಿಗಳೆಂದರೆ ಕೇವಲ ಶಬ್ದಾಡಂಬರದ ಬಂಟರೆಂಬ ವಿಷಯದಲ್ಲಿ ನಿನಗೆ ಬಹಳ ಸಂಶಯುವಿದೆಯೇ?"

"ಭಾವ!....ಏನು ಭಾವ?"

"ಹಾಗೆ ಕೇಳು. ಕವಿಯನ್ನು ಪಶುವಿಗೆ ಅಥವಾ ಪಕ್ಷಿಗೆ, (ಇಲ್ಲವೇ ಪಕ್ಷಿ-ಮೃಗಗಳನ್ನು ಕವಿಗೆ) ಹೋಲಿಸಬಹುದು. ಭಾವವಿರಬೇಕು. ಯಾವ ಭಾವ?—ಉದಾಹರಣಾರ್ಥ ನಾನು ಬರೆದ 'ಕಾ....ಗೆ' ಎಂಬ ಕವಿತೆಯಲ್ಲಿ ಕಾಗೆಯನ್ನು ಮನುಷ್ಯನಿಗೆ ಹೋಲಿಸಿದ್ದೇನೆ...."

ನಾನು ಕಂಗಾಲಾಗಿ, "ಹು!" ಎಂದೆ.

"ನನಗೆ ತಿಳಿದಿದೆ ನೀನು ಕಂಗಾಲಾಗುವಿಯೆಂದು. ಆದರೆ, ಯಾವ ಸುಂದರವಾದ ಅರ್ಥ ಹೇಳುವೆ ನೋಡು!"—ಎಂಬ ದೃಷ್ಟಿಯಿಂದ ಸಿದ್ದಣ್ಣನು,—"ಅಹುದು, ಕಾಗೆಯನ್ನು ಮನುಷ್ಯನಿಗೆ ಹೋಲಿಸಿದ್ದೇನೆ!" ಎಂದನು.

"ಕವಿ! ನೀನು ಕವಿಯೇ?"

"ಒಬ್ಬ ಕವಿ!"

"ಹ್ಹು! ಇದು ಸುದ್ದಿ!....ಇದು ಸ್ವಾಭಾವಿಕವೇ?"

"ಯಾವುದು,—ನಾನು ಕವಿಯಾಗಿರುವುದು?"

"ಅಲ್ಲ, ಕಾಗೆಯನ್ನು ಮನುಷ್ಯನಿಗೆ ಹೋಲಿಸಿದುದು."

"ಪೂರ್ಣ."

"ಗಿಳಿ ಕೂಡ ಅಲ್ಲ! ಕಾಗೆ!" ಎಂದು ದುಃಖದಿಂದ ನುಡಿದೆ.

"ಅಹುದು, ಕಾಗೆಯೇ!....ಕೇಳು, ಹೀಗಿದೆ ಆ ಕವಿತೆ:—

ಕಾಗೇ ಹಾರು ಕಾಗೇ ಹಾರು
ತೆಂಗಿನ ಮರಕೆ ಹಲಸಿನ ಮರಕೆ
ಬಡವನ ಗುಡಿಸಲಿಗೇ—ಆತನ ಅಂಬಲಿ ಬಟ್ಟಲಿಗೇ ||

ಕೊಕ್ಕನು ಚುಚ್ಚು ಅನ್ನವ ತಿನ್ನು
ಏರುತ ಹೋಗೊ ನೀನು—ಆತನು—ಉಳಿದುದ ತಿಂದಾನೂ ||

"ಇದು ಕೇವಲ ಒಂದು ಪದ್ಯ—ಇನ್ನೆಷ್ಟೋ ಇವೆ!"

"ಪದ್ಯ?"

"ಅಹುದು—ಪದ್ಯ, ಸ್ವತಂತ್ರ....ಸರಳ....ಓದಿದರೆ ಏನಿಲ್ಲ....ಆಲೋಚಿಸಿದರೆ ಎಲ್ಲ ಉಂಟು."

"ಬರೇ ಕಾಗೆ!"

"ಥೇಟು ಕಾಗೆ—ಒಂದೇ ಕಾಗೆ! ಹಾರುತ್ತಿದೆ, ಬಡವನ ಗುಡಿಸಲಿಗೆ ಬರುತ್ತಿದೆ, ಅನ್ನ ತಿನ್ನುತ್ತಿದೆ. ಪುನಃ ಹಾರುತ್ತದೆ."

"ಸ್ವಾಭಾವಿಕ. ಆದರೆ...."

"ಆದರೆಗಳಿಲ್ಲ. ಸ್ವಾಭಾವಿಕ–ಅಷ್ಟೆ. ಇದರ ಅರ್ಥ ತಿಳಿಯಿತೆ?"

"ಅಹುದು,—'ಕಾಗೆಯೋ ಹಾರು, ಅನ್ನ ತಿನ್ನು, ಮತ್ತೆ ಪುನಃ ಹಾರು' ಎಂದು ಮನುಷ್ಯನು ಪ್ರೇಮದಿಂದ ಹೇಳುತ್ತಾನೆ."

ಸಿದ್ದಣ್ಣನು ಶ್ರೇಷ್ಠತ್ವದ ಮುಖಮುದ್ರೆಯಿಂದ ನನ್ನನ್ನು ನೋಡುತ್ತ,—"ನನಗೆ ಗೊತ್ತಿದೆ—ನೀನು ಇದಕ್ಕಿಂತ ಹೆಚ್ಚಿನದೇನನ್ನೂ ಅರಿಯಲಾರಿಯೆಂದು! ಕೇಳು,—ಇದು ಕಾಗೆಗೆ ಮನುಷ್ಯನ ಪ್ರೇಮದ ನುಡಿಯಲ್ಲ. ಕಾಗೆಯು, ಬಹುಜನ ಸೇವಕರು ಪಹರೆಮಾಡುವವರಲ್ಲಿಗೇನೂ ಹೋಗದೆ, ಬಡವನ ಗುಡಿಸಲಿಗೇ ಹೋಗಿ, ಆತನ ಅನ್ನವನ್ನೆ ತಿನ್ನಲು ಯತ್ನಿಸುತ್ತದೆಂದು ಅರ್ಥ. ವ್ಯಂಗಾರ್ಥ: ಬಡ ಮಜೂರರನ್ನು ಬಂಡವಾಳಷಾಹಿಯು ಶೋಷಿಸುವ ಚಿತ್ರ."

"ಹೊ!........ ...."

"ಶ್ರೀಮಂತರು, ಬಡವರುಂಬುವ ಅಂಬಲಿಯಿಂದಲೇ ತಾವು ಕುಡಿಯಲೆತ್ನಿಸುವರೆಂದು, ಅಥವಾ ಕಾಗೆಯಂತೆ ಸ್ವತಂತ್ರವಾಗಿ ಹಾರಾಡಿ, ಬಡವರ ನೆತ್ತರಿಂದಲೇ ಬೆಳೆದು ನಲಿಯುವರೆಂದರ್ಥ."

"ಹೊ!..............."

"ಸುಲಭವಾಗಿ ಏನಾದರೊಂದು ದೊರೆವಲ್ಲಿ ಮನುಷ್ಯನು ಧರ್ಮಾಧರ್ಮಗಳ ತಾರತಮ್ಯವಿಲ್ಲದೆ ಪರದ್ರವ್ಯ ಶೋಷಣೆ ಮಾಡುವನೆಂದರ್ಥ."

"ಹ್ಞೊ!..............."

"ಲಕ್ಷ್ಮೀಶನಲ್ಲಿ ಉಂಟೇ ಇದು?"

ಲಕ್ಷ್ಮೀಶನು,—ಹಾರಾಡಿ ಬಡವರ ಅಂಬಲಿಗೆ ಕೊಕ್ಕನ್ನು ಕೊಡಹಿ ಪುನಃ ಹಾರಾಡಬೇಕೆಂದು ಯಾವ ಕಾಗೆಗೂ ಬೋಧಿಸಿದುದು ನನಗೆ ನೆನಪಿಲ್ಲ. ಸೋಲನ್ನು ಒಪ್ಪಿದೆ.

ನನ್ನನ್ನು ಮತಾಂತರಗೊಳಿಸಿದ ವಿಜಯಗೌರವದಿಂದುಬ್ಬುತ್ತ ಸಿದ್ದಣ್ಣನು, ಹೇಳಿದ:—"ಇನ್ನೂ ಕೇಳು. ನಾನು ಈ ತನಕ ಸುಮಾರು ಏಳುನೂರು ಕವಿತೆಗಳನ್ನು ಬರೆದಿದ್ದೇನೆ!"

"ಏಳುನೂರು?....ಅಚ್ಚಾಗಿದೆಯೇ?" ಎಂದು ದೈನ್ಯದಿಂದ ಕೇಳಿದೆ.

"ಛಾಪಖಾನೆ ಒಂದು ನನಗೇ ಬೇಕಾದೀತು. ಮೂರು ಸಾವಿರ ಪುಟವಾಗಬಹುದು, ಕೊಂಡುಕೊಳ್ಳುವವರು ಬೇಡವೇ,—ಬೇಡಿ ಓದುವ ನಮ್ಮಲ್ಲಿ?'

'ನಿಜ.'

'ಇನ್ನೂ ಕೇಳು. ಲಕ್ಷ್ಮೀಶ—ಪಂಪ—ನೃಪತುಂಗ—ಬಬ್ಬುರ್ಯ ಎಂದು ಹೊಗಳುವಿರಲ್ಲಾ ನೀವು! ನನ್ನಿಂದ ನಿನಗೆ ಯಾವ ಕವಿತೆ, ಯಾವ ನಿಮಿಷದಲ್ಲಿ, ಯಾವ ವಿಷಯದ ಮೇಲೆ ಬೇಕು—ಹೇಳು.'

ಇದು ಖಂಡಿತವಾಗಿಯೂ ಆಶ್ಚರ್ಯ. ಕುತೂಹಲ ತೋರಿತು. ಅತ್ತಿತ್ತ ನೋಡಿದೆ. ಚಿಕ್ಕ ಹುಡುಗನೊಬ್ಬನು, ದೂರದಲ್ಲಿ ಸೈಕಲ್ ಏರಿ, ಸವಾರಿ ಮಾಡುವ ಯತ್ನದಲ್ಲಿದ್ದನು. ಸಿದ್ದಣ್ಣನನ್ನು ನೋಡಿ,—'ಅಕೋ ಆ ಸೈಕಲ್!' ಎಂದೆ.

ಒಂದೂ ಕಾಲುನಿಮಿಷ...........ಬಂತು ಸಿದ್ದಣ್ಣನ ಬಾಯಿಯಿಂದ ಕವಿತೆ!—

ಗರಗರನೆ ಮಿರಿಮಿಂಚಿ ತಿರುಗಿ
ನರಪಾದ ಘಾತಕ್ಕೆ ಮಣಿದು
ಮುಂದರಿವೆ ಚಕ್ರವೇ ಬಾಗಿ
ದಣಿಸುವೇ ದಣಿಯದೇ ಕುಣಿದು
ಸಂಸಾರ ಚಕ್ರದಲಿ ಮನುಜ

ಸುತ್ತಿ ಸುಳಿವನು ನಗುತ ವ್ಯರ್ಥ
ಚಕ್ರ ನಿಲ್ಲದು ವರ್ಷ ಸಹಸ್ರ
ಮನುಜನರಿಯನು ವಿಚಿತ್ರ

ಉಸಿರೆಳೆಯದೆ ಅಷ್ಟನ್ನೂ ಹೇಳಿ ಮುಗಿಸಿ, ಉಸಿರೆಳೆದು,—"ಹೇಗೆ?" ಎಂದು ಕೇಳಿದನು.

'ಕೇವಲ ಆಶ್ಚರ್ಯಕರ!' ಎಂದೆ.

ಎರಡು ನಿಮಿಷ ನಾವಿಬ್ಬರೂ ಮೌನವಾಗಿ ಒಬ್ಬರನ್ನೊಬ್ಬರು ನೋಡಿದ ಬಳಿಕ, ಕೇಳಿದನು ಸಿದ್ದಣ್ಣ:—'ಈಗ ನಿನ್ನ ಅಭಿಪ್ರಾಯವೇನು—ಹೊಸ ಕವಿತೆಯ ವಿಷಯದಲ್ಲಿ?'

ಏನಾಶ್ಚರ್ಯ!—ನನ್ನ ಉತ್ತರವು ಸಿದ್ದಣ್ಣನಿಗೆ ಕವನದ ರೂಪದಲ್ಲೆ ಹೊರಟಿತು!—

ಲಕ್ಷ್ಮೀಶ—ನೃಪತುಂಗ—ಪಂಪ,
ಹಳೆಯ ಆಲಗಳವುಗಳಿಗೆ ನಾವು,
ನೇತಾಡಲಾರೆವು! ಸ್ವತಂತ್ರ
ಕವಿತೆಗಳು ತಿಳಿನೀರು, ಸತ್ಯ!

'ಭೇಷ್!' ಎಂದು ಒದರಿದನು ಸಿದ್ದಣ್ಣ.

× × × × ×

ಹಾಸ್ಟೆಲಿಗೆ ಹೋಗಿ (ನಾನು ನಮ್ಮ ಶಾಲಾ ಹಾಸ್ಟೆಲಿನಲ್ಲಿದ್ದೆ) ಊಟಕ್ಕೆ ಕುಳಿತಾಗ, ಅಡುಗೆಯವನು, 'ಪಲ್ಯ ಇನ್ನೂ ಬೇಕೆ?' ಎಂದು ಕೇಳಲು,—

ಪಲ್ಯ ಅನ್ನಾದಿಗಳು ಬೇಕು
ಒದರುತಿದೆಯುದರ—ಸ್ವಲ್ಪ ಸಾಕು

ಎಂದು ಉತ್ತರ ಕೊಟ್ಟೆ.

ಅಡುಗೆಯವನು ಆಶ್ಚರ್ಯದಿಂದ ದೃಷ್ಟಿಯೆತ್ತಿ, 'ಈ ದಿನ ಹಾಲೋ ಮಜ್ಜಿಗೆಯೋ?' ಎಂದು ಕೇಳಿದನು.

ಮಜ್ಜಿಗೆಯೆ ಸರ್ವಶ್ರೇಷ್ಠಂ
ಕರುಳ ಬಾಧೆಗೆ ದಿವ್ಯೌಷಧಂ

ಎಂದೇ ಪುನಃ ಉತ್ತರ ಕೊಟ್ಟೆ.

ಬಹುಶಃ ಅವನು ನನಗೆ ಮನೋಸ್ವಾಸ್ಥ್ಯವಿಲ್ಲವೆಂದು ಊಹಿಸಿರಬಹುದು. ಇಲ್ಲದಿದ್ದರೆ ಹಾಗೆ ಗೊಂಬೆಯಂತೆ ನಿಂತು ನೋಡುವುದೆಂದರೇನು?—ಅವನನ್ನು ಸಮಾಧಾನಪಡಿಸಲು,—

ನಾನೇನೂ ಹುಚ್ಚನಲ್ಲ
ಹುಚ್ಚನಾದರು ಅಚ್ಚನಲ್ಲ
ನನಗೆ ಕವಿತೆಯು ಹುಚ್ಚು
ನಿನಗೆ ಕಾಣಬಹುದದು ಹೆಚ್ಚು
ನಾನೇನು ಮಾಡಲಿ? ಹೇ ಪೆಚ್ಚು.

ಎಂದು ಕವನದಲ್ಲಿ ಹೇಳಿದೆ.

"ಸ್ವಾಮಿ! ಇದೇನು?" ಎಂದು ಧೈರ್ಯದಿಂದ ಕೇಳಿದನು.

ನೆನಸಿದೆ ನಾನು ಮೊದಲು,—ಅಡುಗೆ ಮಾಡುವವನಿಗೆ ನವಕವಿತೆಯ ಗೊಡವೆ ಏಕೆ—ಎಂದು ನೆನಸಿದೆ. ಆದರೆ, ಆತನ ಜಿಜ್ಞಾಸಪೂರ್ಣ ಮುಖಭಾವವನ್ನು ಕಂಡು, ಜ್ಞಾನಲಾಭ ತೃಷೆಯಿದ್ದವರಿಗೆ ದಾನಮಾಡಬೇಕೆಂಬ ಪರೋಪಕಾರ ಬುದ್ಧಿ ಹುಟ್ಟಿತು. ಕೂಡಲೇ, ಬಟ್ಟಲಿನ ಮುಂದೆ ಕಾಲು ಚಾಚಿ ಕುಳಿತು, ಬಲು ದೀರ್ಘವಾದ ಒಂದು ಭಾಷಣಮಾಡಿ, 'ಇನ್ನು ತಿಳಿಯಿತೇ? ಬೇಕು ಭಾವಮಾತ್ರ; ಭಾವವಿದ್ದರೆ ಮಾತ್ರ ಕವಿತೆ; ಇಲ್ಲದಿದ್ದರೆ ಕೇವಲ ಶಬ್ದಗಳನ್ನು ಪೋಣಿಸಿದ್ದೊಂದು ಟೊಳ್ಳು ಕವನ' ಎಂದು ಮುಗಿಸಿದೆ. ಆತನು ನಿಂತು ಕಿವಿಗೊಟ್ಟು ಕೇಳುತಿದ್ದನು. ಕಾವ್ಯದಲ್ಲಿ ಆತನಿಗೆ ಅಭಿರುಚಿಯಿತ್ತೆಂದು ತೋರುವುದು. ಭಾಷಣಮಾಡಿ ಮುಗಿಸಿದ ನಂತರ, ತಣ್ಣಗಾದ ಅನ್ನವನ್ನು ಭುಂಜಿಸಿ, ಕೈತೊಳೆದೆದ್ದು ಹೋದೆ.

× × × × ×

ಇದಾದ ಏಳು ದಿನಗಳ ನಂತರ, ಹಾಸ್ಟೆಲ್ ಸುಪರಿಂಟೆಂಡೆಂಟರು ನನ್ನನ್ನು ಅವರ ಕೋಣೆಗೆ ಬರಮಾಡಿಸಿ,—"ಅಡುಗೆಭಟ್ಟ ಸುಬ್ಬಣ್ಣನ ವಿಷಯವಾಗಿ ಏನಾದರೂ ಗೊತ್ತಿದೆಯೇ?" ಎಂದು ಕೇಳಿದರು.

"ಅವನು ಪಣಂಬೂರಿನವನಂತೆ........" ಎಂದು ಬಾಯ್ತೆಗೆದೆ.

ಸುಪರಿಂಟೆಂಡೆಂಟರು ನನ್ನನ್ನು ತಡೆದು, 'ಹಾಗಲ್ಲ,—ಇತ್ತೀಚೆಗೆ

ಅವನ ಮನಸ್ಥಿತಿಯ ವಿಷಯ ಏನಾದರೂ ತಿಳಿದುಬಂದಿದೆಯೇ?" ಎಂದು ಪ್ರಶ್ನಿಸಿದರು.

"ಇಲ್ಲ" ಎಂದೆ.

ಸುಪರಿಂಟೆಂಡೆಂಟರು ದುಃಖದಿಂದ—'ಇತ್ತೀಚೆಗೆ ಪಲ್ಯಗಳು ಸರಿಯಾಗುತ್ತಿಲ್ಲವೆಂದು ಹುಡುಗರು ದೂರಿಡುತ್ತಿರುವರಲ್ಲಾ—ಎಂದು ನಾನು ಆತನೊಡನೆ ಕೇಳಿದಾಗ, ಕಣ್ಣುಗಳನ್ನು ಆಡಿಸುತ್ತ—

ಹೊಟೆಲು ಸಿನೆಮ ಬಿರ್‍ಯಾನಿ
ಪುಲಾವು ಬೀಯರ್ ಮತ್ತು ಸಿಗರ್—
—ಏಟು ಟಾನಿಕ್ಕು ಬ್ರಿಲ್ಯೆಂಟಿನ್
ಇವುಗಳಿರೆ ರುಚಿಯು ನಾಸ್ತಿ

—ಎಂದು ನನಗೆ ಉತ್ತರ ಕೊಟ್ಟನು! ಆತನ ತಲೆಗಿಲೆ....? ಸಂದೇಹ! ರಾತ್ರೆ ನಿಮ್ಮ ಕೊಠಡಿಯ ಬಾಗಿಲುಗಳು ಭದ್ರವಾಗಿರಲಿ! ನಾನು ಅವನನ್ನು ನಾಳೆಯೇ ಕೆಲಸದಿಂದ ತೆಗೆದುಹಾಕುವೆನು!'—ಎಂದರು.

ಕೇಳಿ, ತಲೆ ತಿರುಗಿತು. ಎದೆಗುಂಡಿಗೆಯು ಹದಮೀರಿ ಬಡೆಯುತ್ತಿದ್ದಂತೆ ನಾನು ಅಲ್ಲಿಂದ ಪಲಾಯನಮಾಡಿ, ನನ್ನ ಕೊಠಡಿಗೆ ತೆರಳಿ,—ಸಿದ್ದಣ್ಣನ ಉಪದೇಶದ ದಿನದಿಂದ ಅಂದಿನ ವರೆಗೆ (ಏಳು ದಿನ) ಬರೆದ ನೂರಿಪ್ಪತ್ತಾರು ಕವಿತೆಗಳನ್ನೂ ಹರಿದುಹಾಕಿ,—ಆ ತನಕ ಬಹಿಷ್ಕರಿಸಲ್ಪಟ್ಟ ಪಠ್ಯಪುಸ್ತಕಗಳಿಂದೊಂದನ್ನೆತ್ತಿ, ಓದಲು ಕುಳಿತೆ!

ಆ ರಾತ್ರೆ ನನ್ನ ತಲೆಯಲ್ಲಿ ಒಂದೇ ಯೋಚನೆ:—'ನಾನು ಬದುಕಿದೆ! ಆದರೆ, ಅಡುಗೆ ಸುಬ್ಬಣ್ಣನನ್ನು ಇನ್ನು ಕಾಪಾಡುವವರಾರು?"

---

## ೧೨. ಬೇಕಾಗಿದೆ

"ದಿವ್ಯವಿಲಾಸ" ಹೊಟೇಲಿನಲ್ಲಿ, ನೂರು ಜನರ ಕೋಲಾಹಲದ ನಡುವೆ ಮೂರು ವ್ಯಕ್ತಿಗಳು ಒಂದು ಮೇಜಿನ ಸುತ್ತಲೂ ಕುಳಿತು, ಕಣ್ಣು-ಕೈ-ಕಾಲುಗಳನ್ನು ಸುಖವಾಗಿ ಆಡಿಸಿ, ತಮ್ಮ ಮುಂದಿರುವ ಪ್ಲೇಟುಗಳಲ್ಲಿನ

ತಿಂಡಿಯನ್ನೂ ತಟ್ಟೆಯಲ್ಲಿದ್ದ ಕಾಫಿಯನ್ನೂ ಅದೃಶ್ಯಸಾಮ್ರಾಜ್ಯಕ್ಕೆ ಕಳುಹಿಸುತಿದ್ದವು. ಆಗ ಗಂಟೆ....ಗಂಟೆ ಎಷ್ಟಾದರೇನು,-ಸಾಯಂಕಾಲ!

"ನಾನು ಹೇಳಿದಂತೆಯೇ, ತುದಿ ಬುಡವಿಲ್ಲ!" ಎಂದನೊಬ್ಬ,-ಒಣ ಕೂದಲುಗಳನ್ನು ಇದ್ದಕ್ಕಿದ್ದಂತೆ-ತೈಲವಿಲ್ಲದೆ ಬಾಚಿದವನು.

"ಬುಡವಿದೆ, ತುದಿಯಿಲ್ಲ" ಎಂದನು ಮತ್ತೊಬ್ಬ, ಗಾಂಧಿ ಟೋಪಿ ತಲೆಯವ.

"ಅಹುದು! ಈ ಹೊಟೇಲಿನ ಹೆಸರೇ ಉದಾಹರಣೆ. "ದಿವ್ಯ ವಿಲಾಸ"ವಂತೆ! ಇದಕ್ಕೊಂದು ಅರ್ಥವಿದೆಯೆ? ಎಲ್ಲೆಲ್ಲಿಯೂ ವಿಲಾಸಗಳು! ಸಮಾಸವಿದ್ದರಾಯಿತು, ವಿಲಾಸಗಳಾಗುತ್ತವೆ. ರಾಮವಿಲಾಸ, ಗಾಂಧಿ ವಿಲಾಸ, ವಿಧಿವಿಲಾಸ-ಎಲ್ಲ ವಿಲಾಸಗಳಾದುವು. ಮುಂದಿನವು ಚಾಪ್ಲಿನ್ ವಿಲಾಸ–ಸುಲೋಚನಾ ವಿಲಾಸ–ಏನೂ ದೊರೆಯದಿದ್ದರೆ, ಕೆನರಾ ವಿಲಾಸ. ಏನಯ್ಯಾ, ಈ ವಿಲಾಸಗಳು! ವಿಲಾಸವೆಂಬ ಹಲಗೆಯನ್ನು ಹೊರಗೆ ತೂಗ ಹಾಕದಿದ್ದಲ್ಲಿ ಒಳಗೆ ಕಾಫಿಯಿರುವುದೆಂದು ನಂಬಲು ಯಾರೂ ಸಿದ್ಧವಿಲ್ಲದಂತಾಗಿದೆ. ವಿಲಾಸಗಳಿಗೆ ಮಿತಸಂತತಿ ತತ್ವವನ್ನೆ ಯಾರೂ ಬೋಧಿಸಿಲ್ಲ!" ಎಂದನು ಮೂರನೆಯವ, 'ಡಬ್ಬಲ್ ಬ್ರೆಸ್ಟ್ ಎಕ್ಸಟ್ರಾ ಸುಪರ್‌ಕೋಟಿ'ನವ. ತಲೆ ಖಾಲಿ, ಅಂದರೆ ನೆಟ್ಟಗೆ ಬಾಚಿರುವನು-'ಒಕ್ಸ್‌ಫರ್ಡ್ ಕ್ರೊಪ್' ಅಂತೆ.

"ಜಾಹೀರಾತುಗಳೂ ಹಾಗೆಯೇ—ತುದಿಬುಡವಿಲ್ಲ!" ಎಂದನು ಮೊದಲನೆಯವನು, "ತುದಿಬುಡ"ವೆಂಬ ಶಬ್ದವು ತನ್ನೊಂದಿಗೇ ಬುಡವನ್ನು ಕಂಡು, ತುದಿಯಿಲ್ಲದೆ ಉಸಿರಲ್ಪಡುತ್ತಲೇ ಇರಬೇಕೆಂದೇನಾದರೂ ನಿಯಮವಿದ್ದವನಂತೆ.

ಎರಡನೆಯವನು ಬಾಯ್ತೆರೆದನು: "ಭಯಂಕರ, ಭಾರೀ ಭಯಂಕರ! **"ನೀವು ಊಟಮಾಡುವಾಗ!"** ಎಂಬ ಶಿರೋನಾಮೆಯ ಒಂದು ಜಾಹೀರಾತನ್ನು ಮೊನ್ನೆ ಕಂಡೆ 'ಜ್ಞಾನಸಿಂಧು'ವಿನಲ್ಲಿ. ಊಟ ಮಾಡುವಾಗ ಮುಂಡಿಯೂರುವ ಕ್ರಮವೇನಾದರೂ ಹೇಳುವರೋ ಎಂಬ ಕುತೂಹಲದಿಂದ ಓದತೊಡಗಿದ್ದಲ್ಲಿ,—ಕೆಳಗೆ ನಾನು ನೋಡಿದುದೇನು?"

"ಶಿವಳ್ಳಿ ಬ್ರಾಹ್ಮಣರ ಹೊಟೇಲು?"

"ತರಕಾರಿ ಬೀಜ;—ಪ್ರೋಚಾ ಕಂಪೆನಿ?"

"ಎರಡೂ ಅಲ್ಲ ಕಿಲ್‌ಕಿಲೊನ್‌ಬ್ಲಟ್' ಎಂಬ ವಾರ್ನಿಶು ಒಳ್ಳೆಯ ದಂತೆ,—ಅಷ್ಟೆ. ಅದನ್ನು ಅಡಿಗೆಕೋಣೆಯ ಕಿಟಕಿಗಳಿಗೂ ಮಾಡಿನ ಅಡ್ಡಗಳಿಗೂ ಬಳಿದು, ಊಟಕ್ಕೆ ಕುಳಿತರೆ ಮನಸ್ಸಿಗೆ ಉಲ್ಲಾಸವಾಗಿ ಒಳ್ಳೆ ಹಸಿವಂತೆ! ರಾತ್ರಿನ ಡೆಬ್ಬಿಗೆ ಏಳೇ ಆಣೆ. ಮುರಾರಿ, ಏಳೇ ಆಣೆ!"

"ಅವನ ಅಜ್ಜಿ ಸಾವು!" ಎಂದು ಶಪಿಸಿ, ಅಗಲವಾಗಿ ಬಾಯ್ತೆರೆದು ಮುರಾರಿಯು (ಮೂರನೆಯವನು), ಮೂರು ಇಂಚು ವ್ಯಾಸದ ಜಿಲೇಬಿ ಯನ್ನು ಮುರಿಯದೆ ಬಾಯಲ್ಲಿಟ್ಟು, ಕಿಲ್ ಕಿಲೊನ್‌ಬ್ಲಟ್ ಡಬ್ಬಿಯ ಜಾಹೀ ರಾತಿನ ಕ್ರಮ ಕೇಳಿ ತನಗುಂಟಾದ ಸಂತಾಪವನ್ನೂ ಅದರೊಂದಿಗೇ ನುಂಗಿ ಬಿಟ್ಟನು.

"ಎಲ್ಲ ವಿದೇಶೀಯರ ಪಾಠ. ಇನ್ನೇನೆಲ್ಲ ಬರುತ್ತದೋ ಪರಮಾತ್ಮ ನಿಗೇ ಗೊತ್ತು!" ಎಂದು ನಿಟ್ಟುಸಿರು ಬಿಟ್ಟು, ಮೊದಲನೆಯ ವೈರಾಗಿಯು ಕಾಫಿಯನ್ನು ಬೊಟ್ಟು ಬೊಟ್ಟಾಗಿ ಚೀಪುತ್ತ, ತನ್ನ ಒಣಕೂದಲ ಮೇಲೆ, ಜಿಲೇಬಿಯ ತುಪ್ಪದ ಕೈಯನ್ನಾಡಿಸಿದನು.

"ಇನ್ನು ಮುಂದಿನ ತಲಾಂತರವು ನೋಡಲಿಕ್ಕಿರುವುದೆಲ್ಲ ಭಯಂಕ ರವೆ! ಮುಂದಿನ ಜಾಹೀರಾತುಗಳೂ ವಿಜಾತೀಯವೇ!" ಎಂದು ಪ್ರವಾದ ನುಡಿದನು, ಮುರಾರಿ (ಇವನು ಮೆಡಿಕಲ್ ವಿದ್ಯಾರ್ಥಿ).

"ಇನ್ನು ವಕೀಲರೂ ಜಾಹೀರಾತಿಗೆ ಆರಂಭಿಸುವರೇನೊ! ಜಾಹೀರಾ ತಿನ ಯುಗ. 'ವಕೀಲ ತಿಮ್ಮಣ್ಣ—ಅಪ್ರತಿಮ—ಬಂಗರಕೇರಿ ಮೂರನೆ ಮನೆಯ ಮಹಡಿಯ ಮೇಲೆ ಏಳನೆ ಕೊಠಡಿಯಲ್ಲಿ ಬಲ ಮೂಲೆಯಲ್ಲಿರುವ ಐದನೇ ಮೇಜಿನ ಹಿಂದೆ ನಾಲ್ಕನೇ ಕುರ್ಚಿಯಲ್ಲಿರುವವನು—(ಅಷ್ಟು ಸ್ಥಳ ಸಂಕೋಚ, ಮನೆ ಬಾಡಿಗೆ ಹೆಚ್ಚು ಮತ್ತು ವಕೀಲರ ಸಂಖ್ಯೆ ವಿಪುಲ ಆ ಕಾಲಕ್ಕೆ!)—ಕೋರ್ಟಿನಲ್ಲಿ ಮೂರೇ ದಿನಗಳಲ್ಲಿ ನಾಲ್ವರು ವಕೀಲರೊಡನೆ ಕಾಳಗವಾಡಿ ಎಲ್ಲರ ಮುಸುಡಿಯೊಡೆದು ದಾಖಲೆ ಸ್ಥಾಪಿಸಿದ್ದಾನೆ; ಜಡ್ಜರ ಕಡೆಗೇ ಒಂದು ದಿನ ಹಾರಿದ್ದಾನೆ—ದೊಡ್ಡ ಸ್ವರ—ಕುಡಿಮೀಸೆ—ಜಗಳಕ್ಕೆ ನಿಂತನೆಂದರೆ, ಕಾನೂನು ಮುಗಿದರೂ ಬಿಡುವವನಲ್ಲ. ಐದು ಸಾವಿರದ ನಂಬ್ರಗಳಿಗೆ ಹನ್ನೆರಡಾಣೆಯಿಂದ ಮೊದಲಾಗಿ ರುಸುಂ....' ಇತ್ಯಾದಿ,

ಮುಂದಿನ ಜಾಹೀರಾತುಗಳು ಈ ಬಗೆಯಾಗಿ ಹರಿದು ಬಂದು, ಜನರನ್ನು ತೇಲಿಸುವುವಯ್ಯಾ!" ಎಂದು ಉಸಿರುಕಟ್ಟಿ ಕಣ್ಣಾಲಿಗಳನ್ನು ಕುಣಿಯಿಸಿ, ಬಾಯಲ್ಲಿ ನೊರೆ ತೆಗೆದು ಹೇಳಿದನು, ಎರಡನೆಯವನು;—ಅವನ ಹೆಸರು ಕಲ್ಯಾಣಶಂಕರನಂತೆ(ಎಫ್. ಎ.ಯಲ್ಲಿ ಮೂರು ವರ್ಷ ಓದಿ, ಕೋಪದಿಂದ ಬ್ರಿಟಿಷರನ್ನೆ ದೂರಿ, ಇನ್ನು ಓದಲಾರೆನೆಂದು ಠರಾವು ಮಾಡಿ ಕುಳಿತವನಂತೆ).

"ಅಥವಾ 'ಸೇಫ್ಟಿಪಿನ್'ಗಳನ್ನು ಜಾಹೀರಾತಿನಲ್ಲಿ ಪ್ರಪಂಚದ ಎಂಟನೇ ಅದ್ಭುತವೆಂದೇ ಶಿರೋನಾಮೆ ಹಾಕಿ ಜನರ ಲಕ್ಷ್ಯವನ್ನತ್ತ ಸೆಳೆದು,-'ಸೇಫ್ಟಿ ಪಿನ್ ಇಲ್ಲದ ನರನು ಕಲ್ಲಿಗೆ ಸಮ; ಕೊಂಡುಕೊಳ್ಳುವಾಗ ಹಂದಿಯ ಕಾಲ್‌ಗೊರಸಿನ ಚಿತ್ರವಿರುವ ನಮ್ಮ ಟ್ರೇಡ್ ಮಾರ್ಕನ್ನೆ ನೋಡಿ ಕೊಂಡುಕೊಳ್ಳಿ!'' ಎಂದು ಎಚ್ಚರ ಹೇಳುವರೊ ಏನೊ! ಈ ವಿಚಿತ್ರ ಶಿರೋನಾಮೆಗಳೂ ಟ್ರೇಡ್ ಮಾರ್ಕಿನ ವಸ್ತುಗಳೂ ಮುಗಿಯುವುದೆಂದಿಗೋ! ಗೋಳೀ ಮರದ ಬೀಳಲನ್ನು ಕೂಡ 'ಟ್ರೇಡ್ ಮಾರ್ಕ್' ಎಂದು ಚಿತ್ರಿಸಿದ್ದಾಯಿತು. ಇನ್ನು ಕೂದಲು, ಸೂಜಿಮೊನೆ, ಬಾದಾಮಿನ ಕೆತ್ತೆ....ಸ್, ದೇವರೇ ಬಲ್ಲ!" ಎಂದನು ಮೊದಲನೆಯವನು: ಅವನ ಹೆಸರು ದಿನಕರನಂತೆ. ಇವನು ಉಡುಪಿಯಿಂದಿಲ್ಲಿಗೆ ಬಿ. ಎ. ಓದಲು ಬಂದವನು. ಬಂಗರಕೇರಿಯಲ್ಲೊಂದು ಮಹಡಿಯ ಮೇಲೆ ಎರಡು ಕೋಣೆಗಳನ್ನು ಬಾಡಿಗೆಗೆ ಪಡೆದು ಇದ್ದವನು.

"ಈಗ ಹುಡುಗ—ಹುಡುಗಿಯರ ಜಾಹೀರಾತುಗಳು ಹೆಚ್ಚಿವೆ. 'ಬೇಕಾಗಿದೆ ಬ್ರಾಹ್ಮಣ ತರುಣಿ' ಎಂದೋ, 'ಬೇಕಾಗಿದೆ. ನೂರಿನ್ನೂರು ಸಂಬಳದ ವರನು' ಎಂದೋ ಜಾಹೀರಾತುಗಳು! ನಾನು ಸಣ್ಣವನಿರುವಾಗ ಇಂತಹ ಜಾಹೀರಾತುಗಳೆಲ್ಲ ಬಂದರೆ ಇಡೀ ಊರೇ ಆಶ್ಚರ್ಯದಿಂದ ಉಸಿರು ಕಟ್ಟಿ ಕಳವಳಿಸುತ್ತಿತ್ತು!'' ಎಂದನು ಮುರಾರಿ.

"ಅದು ತಪ್ಪಲ್ಲವಯ್ಯಾ........'' ಎಂದು ಬಾಯ್ತೆಗೆದನು ಕಲ್ಯಾಣಶಂಕರ.

"ಯಾವುದು ಉಸಿರುಕಟ್ಟಿದುದು?''

"ಅಲ್ಲ, ಬೇಕಾಗಿದೆಯೆಂಬ ಜಾಹೀರಾತು! ಒಳ್ಳೇ ವರನನ್ನು ಅಥವಾ

ವಧುವನ್ನು ಹುಡುಕಿಹೋಗಲು ಹಣದ ಅಭಾವ—ಸಮಯದ ಅಭಾವವಿದ್ದವರು, ಮೂರು ರೂಪಾಯಿ ಖರ್ಚಿನೊಳಗೆ ಅದು ಸಾಧಿಸಲೆಂದು ಜಾಹೀರಾತು ಕೊಡಬಹುದು!" ಎನ್ನುತ್ತ ಕಲ್ಯಾಣಶಂಕರನು ಕಿಸೆಯೊಳಗಿಂದ ಒಂದು ಬೆಂಕಿಕಡ್ಡಿ ತೆಗೆದು, ಅದನ್ನು ಹಲ್ಲುಗಳಿಂದ ಜಜ್ಜಿ, ಉಗುಳುತ್ತ ತತ್ವಜ್ಞಾನಿಯಂತೆ ಗುರಿಯಿಲ್ಲದೆ ನೋಡಿದನು.

"ಹಾಗಾದರೆ ಮತ್ತಾವುದಯ್ಯಾ ತಪ್ಪು? ಎಲ್ಲವೂ ಒಪ್ಪೇ. ಜನರಲ್ಲಿ ನಾಗರಿಕತನವು ಹೆಚ್ಚಿದಂತೆ ಜಾಹೀರಾತುಗಳು ಬಣ್ಣ ಬಣ್ಣದಿಂದ ಹೊರಡುತ್ತಿವೆ. ಜಾಹೀರಾತುಗಳ ಸುಧಾರಣೆಯಿಂದಲೇ ಜನರ ಸುಧಾರಣೆಯನ್ನು ಅಳೆವಂತಾಗಿದೆ. ಕಾಲಕಷ್ಟ!" ಎಂದು ನುಡಿದು, ಮುರಾರಿ ಅನುಮೋದನೆಗಾಗಿ ದಿನಕರನ ಕಡೆಗೆ ನೋಡಿದನು.

"ತಪ್ಪೋ ಒಪ್ಪೋ ದೇವರೇ ಬಲ್ಲ. ಯಾವ ಜಾಹೀರಾತೂ ಹೇಗೊ ಬರಲಿ, ಜನರಲ್ಲಿ ವಿವೇಕವಿದ್ದರಾಯಿತು. ಜನರು ಜಾಹೀರಾತನ್ನು ಕಂಡು ಮರುಳರಾದರೂ; ಆ ವಸ್ತು ತಮಗೆ ಅವಶ್ಯವಿದೆಯೋ, ತಮ್ಮ ಮರಳುತನವು ಅದನ್ನು ಕಂಡುಕೊಂಡು ಕೊಳ್ಳುವಷ್ಟಕ್ಕೂ ಮುಂದರಿಯಬಹುದೇ ಎಂಬುದನ್ನು ವಿವೇಚಿಸಿ ವರ್ತಿಸಿದರಾಯಿತು" ಎಂದು ದಿನಕರನು, ಮುರಾರಿಗೂ ಕಲ್ಯಾಣಶಂಕರನಿಗೂ ವಿರೋಧವಿಲ್ಲದೆ ತನ್ನ ಅಭಿಪ್ರಾಯವನ್ನು ತಿಳಿಸಿ, ಕೈತೊಳೆವ ಮೊದಲು ಜಿಲೇಬಿ ಮುಟ್ಟಿದ ಕೈಯನ್ನು ಮತ್ತೊಮ್ಮೆ ತನ್ನ ಒಣಕೂದಲುಗಳ ಮೇಲೆ ಆಡಿಸಿದನು.

ಇನ್ನು ತಂತಮ್ಮ ಅಭಿಪ್ರಾಯಗಳೇನೂ ಇಲ್ಲದ ಕಾರಣ ಮೂವರೂ ಸಂಭಾಷಣೆಯನ್ನು ಅಲ್ಲಿಗೇ ನಿಲ್ಲಿಸಿದರು. ಒಂದೆರಡು ನಿಮಿಷಗಳು ಹೀಗೆ ಮೌನವಾಗಿ ಕಳೆದುವು. ಮೆಲ್ಲನೆ ಕಲ್ಯಾಣಶಂಕರನ ಕಣ್ಣುಗಳು ತುಂಟತನದ ಚಪಲತೆಯಿಂದ ನಲಿದುವು. "ಮುರಾರಿ!" ಎಂದನು.

"ಏನು?"

"ನನ್ನದೊಂದು ಸೂಚನೆಯಿದೆ."

"ಹೇಳಯ್ಯಾ."

"ನಮಗೀಗ ಕೆಲಸವೇನೂ ಇಲ್ಲ. ಒಂದು ಅನಪಾಯಕರವಾದ ವಿನೋದದ ಆಟವನ್ನು ಹೂಡುವ ವಿಷಯ, ನಿನ್ನ ಅಭಿಪ್ರಾಯವೇನು?"

"ಅದು ಆಟದ ಮೇಲೆ ಹೊಂದಿಕೊಂಡಿದೆ."

"ಅತಿ ಸುಲಭ, ಅತ್ಯಧಿಕ ತಮಾಷೆ! ನಾನು ಒಂದು ಜಾಹೀರಾತನ್ನು ಜ್ಞಾನಸಿಂಧುವಿನಲ್ಲಿ ಕೊಡುವುದು—"೧೮ ವಯಸ್ಸಿನ ಓರ್ವ ಸುಂದರ ಕನ್ನಿಕೆಗೆ ಯೋಗ್ಯ ವರನು ಬೇಕು" ಎಂದು. ನಮ್ಮೂರಿನಲ್ಲಿ ಎಷ್ಟು ಮಂದಿ ಮರುಳರಿದ್ದಾರೋ ಲೆಕ್ಕ ಮಾಡಬಹುದು."

"ಊರಲ್ಲಿ ಈಗ ಮರುಳರು ಹೆಚ್ಚಿಲ್ಲವೆಂದು ನನ್ನ ಅಭಿಪ್ರಾಯ. 'ಪೇಪರ್ ಮದುವೆ'ಗಳಿಂದ ಕೆಲವರಿಗೆ ವೈರಾಗ್ಯ ಹಿಡಿದಿದೆ. ಆ ವೆಂಕಟಪ್ಪನವರ ಮಗಳು—ಜಲಜೆಯ ಕತೆ ಕೇಳಿಲ್ಲ ನೀನು; ೩೫೦ ರೂಪಾಯಿ ತಲಬಿನ ಗಂಡನೆಂದು ಯಾರೋ ಒಬ್ಬ ಪೋಲಿಯನ್ನು ವಿವಾಹವಾಗಿ ಕೈಗೆ ರಿಸ್ಟ್‌ವಾಚ್ ಕಟ್ಟಿ, ಹದಿನೈದನೇ ದಿನವಲ್ಲಿ ಮಂಗಲಸೂತ್ರ ಸಹಿತ ಎಲ್ಲವನ್ನೂ ಪುನಃ ಆತನಿಗೇ ಕೊಟ್ಟು ಈಗ ಸನ್ಯಾಸಿನಿಯಾಗಿದ್ದಾಳೆ. ಅದು ಪೇಪರ್ ಮದುವೆ!" ಎಂದನು ದಿನಕರ.

"ಸ್ವಲ್ಪ ಸುಮ್ಮನಿರಯ್ಯಾ ನೀನು. ಜಲಜೆ ಸನ್ಯಾಸಿನಿಯಾದ ಕೂಡಲೇ ಊರಲ್ಲಿದ್ದವರೆಲ್ಲ ಜಾಣರಾಗುವುದಿಲ್ಲ" ಎಂದು ಮಾರುತ್ತರವಿತ್ತನು ಕಲ್ಯಾಣಶಂಕರ.

"ಹಾಗಾದರೆ ಕೊಡಯ್ಯ ಜಾಹೀರಾತು! ನೋಡುವ ನಿನ್ನ ತಮಾಷೆ!" ಎಂದನು ದಿನಕರ.

ಮೂವರೂ ಎದ್ದರು. ಹೊರಗೆ ಬಂದು ದುಡ್ಡು ಕೊಟ್ಟು ಮೈದಾನು ಕಡೆಗೆ ಚರ್ಚೆಗಾಗಿ ನಡೆದರು.

* * * * *

ಮೂವರೂ ಒಂದು ಕಡೆಯಲ್ಲಿ ಉಪಸ್ಥಿತರಾದನಂತರ ಕಲ್ಯಾಣಶಂಕರನು ತನ್ನ ಹಂಚಿಕೆಯನ್ನು ವಿವರಿಸಿ ಹೇಳಿದನು. ತಿದ್ದುಪಡಿಗಳು ಬಂದುವು; ಚರ್ಚೆಯಾಯಿತು, ವಿಮರ್ಶೆಯಾಯಿತು, ವಿಚಾರವಾಯಿತು, ವಿನೋದವಾಯಿತು. ಕೊನೆಗೆ, ಈ ಠರಾವುಗಳಾದುವು:

ಕಲ್ಯಾಣಶಂಕರನೇ ಜಾಹೀರಾತು ಕೊಡತಕ್ಕದ್ದು. ಕಲ್ಯಾಣಶಂಕರನು ಇದೇ ಊರಿನವನಾದ ಕಾರಣ, ದಿನಕರನು ಕೊಠಡಿಗಳಲ್ಲಿ 'ಪೇಪರ್‌ವರ' (ಪತ್ರಿಕೆಯಲ್ಲಿನ ಜಾಹೀರಾತು ನೋಡಿ ಬರುವ ಉಮೇದ್ವಾರ)ರನ್ನು ಭೇಟಿ

ಯಾಗತಕ್ಕದ್ದು. ಮುರಾರಿಯು ಪತ್ರಿಕಾ ಆಫೀಸಿಗೆ ಆಗಾಗ ಹೋಗಿ, ಜಾಹೀರಾತಿಗೆ ಉತ್ತರವಾಗಿ ಬಂದ ಪತ್ರಗಳನ್ನು ತರತಕ್ಕದ್ದು.

ಠರಾವುಗಳೆಲ್ಲ ಸ್ವೀಕರಿಸಿಲ್ಪಟ್ಟುವು. ಸಭೆ 'ಮುಕ್ತಾಯ'ವಾಯಿತು.

ಬುಧವಾರದ 'ಜ್ಞಾನಸಿಂಧು'ವಿನಲ್ಲಿ ಈ ಕೆಳಗಣ ಜಾಹೀರಾತನ್ನು ಜನರು ಓದಿದರು: "ಬೇಕಾಗಿದೆ—೧೮ ವಯಸ್ಸಿನ ಓರ್ವ ಶಿಕ್ಷಿತೆ, ಸುಲಕ್ಷಣೆ, ಬ್ರಾಹ್ಮಣಕನ್ನಿಕೆಗೆ ಯೋಗ್ಯನಾದ ವರನು ಬೇಕಾಗಿದೆ. ಪತ್ರವ್ಯವಹಾರ ವನ್ನು ಈ ಕೆಳಗಿನ ವಿಳಾಸಕ್ಕೆ ಮಾಡತಕ್ಕದ್ದು–'X' C/o ಜ್ಞಾನಸಿಂಧು."

* * * * *

ಶುಕ್ರವಾರ ಸಾಯಂಕಾಲ ಮುರಾರಿಯು ಉದ್ರೇಕಗೊಂಡು ದಿನಕರನ ಕೊಠಡಿಯನ್ನು ಪ್ರವೇಶಿಸಿ, ಒಂದು ಪತ್ರವನ್ನು ದಿನಕರನ ಮತ್ತು ಕಲ್ಯಾಣ ಶಂಕರನ ಮುಂದೆ ಒಗೆದು, "ಕೊಳ್ಳಿರಿ ಇದನ್ನು! ಕಲ್ಯಾಣಶಂಕರನಿಗೇ ಜಯ!" ಎಂದು ಕೂಗಿದನು.

ಕಲ್ಯಾಣಶಂಕರನು ಆತುರದಿಂದ ಪತ್ರವನ್ನೊಡೆಬನು. ಇಂಗ್ಲಿಷಿನಲ್ಲಿ 'ಟೈಪ್' ಮಾಡಲ್ಪಟ್ಟಿತ್ತು. ಸಹಿ ಇರಲಿಲ್ಲ. ಪತ್ರದ ಅಭಿಪ್ರಾಯವು ಹೀಗಿತ್ತು: "ನಾನು ಜಮೀನ್ದಾರ. ಪ್ರಾಯ ೪೫ ದಾಟಿದೆಯಷ್ಟೆ. ನಗದಿ ರೊಕ್ಕವೂ ಇದೆ. ಮೊದಲನೆಯ ಹೆಂಡತಿ ತೀರಿಹೋಗಿ ಕೆಲವು ತಿಂಗ ಳಾದುವು. ಮೂವರು ಮಕ್ಕಳಿದ್ದಾರೆ. ನನ್ನ ಹೆಸರನ್ನು ಇಲ್ಲಿ ಕೊಟ್ಟಿಲ್ಲ. ನೀವು 'ಜ್ಞಾನಸಿಂಧು'ವಿನ ವಿಳಾಸಕ್ಕೆ 'Y' C/o ವಿಳಾಸಕ್ಕೆ ಒಂದು ಪತ್ರ ಬರೆದರೆ, ಅದನ್ನು ನೋಡಿ ಕೂಡಲೇ ನಿಮ್ಮಲ್ಲಿಗೆ ಬರುತ್ತೇನೆ. ಆಗ ಮಾತನಾಡಬಹುದು."

"ಸಿಕ್ಕಿದನೊಬ್ಬ ಟೊಣಪ: Y ಅಂತೆ! ಯಮನೋ ಏನೋ!" ಅಬ್ಬರಿಸಿದನು ಕಲ್ಯಾಣಶಂಕರ.

"ಬರೆ, ಈಗಲೇ ಬರೆ ಒಂದು ಉತ್ತರ!" ಎಂದು ಆಗ್ರಹಪಡಿಸಿದನು ಮುರಾರಿ.

ಪತ್ರವು 'ಟೈಪ್' ಮಾಡಲ್ಪಟ್ಟಿತು. "ತಮ್ಮ ಪತ್ರವನ್ನೋದಿ ಸಂತೋಷವಾಯಿತು. ನನಗೆ ಈ ದಿನವೇ ಮೂವತ್ತು ಅರ್ಜಿಗಳು ತಲಪಿ ದರೂ ನಿಮ್ಮದನ್ನೆ ನಾನು ಮೇಲೆತ್ತಿಹಿಡಿದು, ನನ್ನನ್ನು ಈ ದಿನ ಬಂಗರ

ಕೇರಿಯ M. C. ೩೭೫ನೇ ಮನೆಯ ಮಹಡಿಯಲ್ಲಿ ಕಾಣುವಂತೆ ಈ ಉತ್ತರ ಬರೆದಿದ್ದೇನೆ."

ಅರ್ಜುನನು ಐರಾವತಕ್ಕಾಗಿ ಬಾಣಕ್ಕೆ ಪತ್ರವನ್ನು ಚುಚ್ಚಿ ಅಮರಾವತಿಗೆ ಹೊಡೆದ ವೇಗದಿಂದ 'ಜ್ಞಾನಸಿಂಧು'ವಿನ ಇಂದ್ರನ ಕಚೇರಿಗೆ ಕಲ್ಯಾಣಶಂಕರನ ಓಲೆಯು ಹೋಗಿಬಿತ್ತು. ಸಂಪಾದಕರು ತೆರೆದು ನೋಡಿದರು. ತಮ್ಮ ಪುಸ್ತಕದಲ್ಲಿ ಬರೆದಿಟ್ಟ ಒಂದು ವಿಳಾಸಕ್ಕೆ ಕಳುಹಿದರು.

'Y' ನಾಮಾಂಕಿತ ಆ ನಿಗೂಢವ್ಯಕ್ತಿಯು ಇಂದು ರಾತ್ರಿ ೮ ಘಂಟೆಗೆ ಬಂಗರಕೇರಿಯ '೧೮ ವಯಸ್ಸಿನ ಬ್ರಾಹ್ಮಣ ಕನ್ನಿಕೆ'ಯ ಮನೆಗೆ ಬರುವುದೆಂದು ಪತ್ರಬಂದಿದೆ. ಬ್ರಾಹ್ಮಣ ಕನ್ನಿಕೆಯ ಕೊಠಡಿಯಲ್ಲಿ ಮೂವರು ತುಂಟರೂ ಸೇರಿ ಪಿಸುಮಾತಾಡುತ್ತಿರುವರು. ದಿನಕರನು ಪಾಯಿಜಾಮೆಯೊಳಗೆ ದೇಹವನ್ನಿಳಿಸಿ, ಮೇಲೆ ಶರ್ಟನ್ನು ಇಳಿಯಬಿಟ್ಟು, ಅದನ್ನು ಒಕ್ಸ್‌ಫರ್ಡ್ ಕೋಟಿನಿಂದ ಮುಚ್ಚಿ, ರಕ್ತವರ್ಣದ ಒಂದಡಿಯ ನೆಕ್‌ಟೈಯನ್ನು ಕುತ್ತಿಗೆಗೆ ಸುತ್ತಿ, ತಲೆಯನ್ನು ಸುಂದರವಾಗಿ ಬಾಚಿ ಸಿದ್ಧವಾಗಿರುವನು. ಮುರಾರಿಯು, ಒಂದು ತೊಲೆ ಮೀಸೆಯನ್ನು ಮೇಲ್ತುಟಿಗಳ ಮೇಲೆ ಅಂಟಿಸಿ, ಮುಂಡಾಸು ಕಟ್ಟಿ, 'ಪೆನ್ಶನ್'ದಾರರ ವೇಷದಲ್ಲಿದ್ದಾನೆ. ಕಲ್ಯಾಣಶಂಕರನು............ಇವನೀಗ ಧಿಟ್ಟ!..............೧೮ ವಯಸ್ಸಿನ ಬ್ರಾಹ್ಮಣ ಕನ್ನಿಕೆಯಿವನೇ! ತಲೆಯ ಮೇಲೆ ಚವರಿಯನ್ನಿಟ್ಟು, ಹೂ ಮುಡಿದು,—ಹೈಸ್ಕೂಲ್ ಶಿಕ್ಷಣ ಮುಗಿಸಿ ಗಂಡನು ದೊರೆಯದೆ ವೈರಾಗ್ಯ ತಾಳಿದವರ ಚರ್ಯೆಹಿಡಿದು ಕುಳಿತಿರುವನು! ಅಚ್ಚ ಬಿಳಿ ಸೀರೆ, ಹಿಮಾಲಯ ಪರ್ವತದಾಚೆ ಸ್ವರ್ಗವಿರುವುದು ನಿಜವಾದರೆ ಈ ಕನ್ನಿಕೆ ಅಲ್ಲಿಂದಲೇ ಇತ್ತ ಉರುಳಿಬಂದಳೋ ಎಂದು ಯಾವ ಮುತ್ಸದ್ದಿಯೂ ಭ್ರಮಿತನಾಗದಿರನು.

ಟಕ್ ಟಕ್!

ಮೂವರೂ ಹೌಹಾರಿದರು. ಒಬ್ಬರ ಮುಖವನ್ನೊಬ್ಬರು ನೋಡಿದರು. ಮೂವರೂ ನಡುಗುತ್ತಿದ್ದರು.

ಧೈರ್ಯ ಬಂದುದು ಮುರಾರಿಗೆ! "ಏನಯ್ಯ ನಡುಗುತ್ತಿ? ಏಳು, ಒಳಗೆ ಹೋಗಿ ಕುಳಿತುಕೊ. ನಾನು ಹೇಳಿಕೊಟ್ಟ ಹಾಗೆ ಸಪೂರ ಸ್ವರದಲ್ಲಿ

ಮಾತಾಡು" ಎಂದು ಪಿಸುಮಾತಿನಲ್ಲಿ ಕಲ್ಯಾಣಶಂಕರನನ್ನು ಎಚ್ಚರಿಸಿದನು. ತಾನು ಮಾತ್ರ ನಡುಕವನ್ನು ತಡೆಯಲಾರದೆ ಮಹಾಸಂಕಟಕ್ಕೊಳಗಾಗಿದ್ದನು.

ಟಕ್ ಟಕ್ ಟಕ್!—ಪುನಃ!!

ಮಿಂಚಿನ ವೇಗದಲ್ಲಿ ಕಲ್ಯಾಣಶಂಕರನು ಒಳಗಿನ ಕೊಠಡಿಗೆ, ಕಂಗರೂ ಮೃಗದಂತೆ ನೆಗೆದುಹೋದನು. ಮುರಾರಿಯು ನೆಟ್ಟಗೆ ನಿಲ್ಲಲು ಯತ್ನಿಸಿ, ಸಾಧ್ಯವಾಗದೆ ಒಂದು ಕುರ್ಚಿಯ ಮೇಲೆ ಕುಳಿತು, ಕಾಲುಗಳನ್ನು ಒತ್ತಿಹಿಡಿದು, ಕೈಬೆರಳುಗಳಿಂದ ಕುರ್ಚಿಯ ಕೈಗಳ ಮೇಲೆ ಅಶಾಸ್ತ್ರೀಯವಾಗಿ ತಬಲೆ ಬಾರಿಸತೊಡಗಿದನು. ದಿನಕರನು, ಕೆಂಬಣ್ಣದ ನೆಕ್‌ಟಾಯನ್ನು ಒಂದು ಕೈಯಿಂದ ಹಿಡಿದು ಮತ್ತೊಂದರಿಂದ ಬಾಗಿಲು ತೆರೆದನು.

ದೊಡ್ಡ ತಲೆಯ, ಚಿಕ್ಕ ಮುಂಡಾಸಿನ, ನರೆತ ಮೀಸೆಯ, ವಜ್ರದ ಒಂಟಗಳ ಕಿವಿಗಳ, ನಿರಿಗೆ ಬಿದ್ದ ಕೈಗಳ, ಪಟ್ಟೆಯಂಚಿನ ಧೋತರದ, ಹಳೆಯಂಗಿಯ, ಬೆಳ್ಳಿಯ ತಲೆಯ ಬೆತ್ತದ, ಪ್ರಕಾಶಹೀನ ನೇತ್ರಗಳ ವ್ಯಕ್ತಿಯೊಂದು ನಿಂತುಕೊಂಡಿತ್ತು. ಈ ವ್ಯಕ್ತಿಯೂ ನಡುಗುತಿತ್ತು!

ವ್ಯಕ್ತಿಯು ಸಂಕೋಚದಿಂದ ಒಳಗೆ ನೋಡಿ, ಆ ಮೇಲೆ ಹಿಂದೆ ನೋಡಿ, ಇಬ್ಬದಿಗಳಲ್ಲಿಯೂ ದೃಷ್ಟಿ ಪಸರಿಸಿ, ಪುನಃ ಒಳಗೆ ಇಣಿಕಿ,— ದಿನಕರನನ್ನು ಸಂದೇಹದೃಷ್ಟಿಯಿಂದ ಮೂರು ನಿಮಿಷ ಚೆನ್ನಾಗಿ ದೃಷ್ಟಿಸಿ, ಆ ಮೇಲೆ "ಇದು—ನೀವು—ಎಲ್ಲಿ—ನೀವು ಯಾರು?" ಎಂದು ತೊದಲ್ನುಡಿಯಿತು.

ದಿನಕರನಿಗೆ ನಡುಕದಿಂದ ಮಾತೇ ಹೊರಡದು. ಎಲ್ಲದಕ್ಕೂ ತಲೆಯಲ್ಲಾಡಿಸಿದನು.

"ಬರಲೇ?" ಎಂದಿತು ವ್ಯಕ್ತಿ. ಬರಬಹುದೆಂದು ತಲೆಯಲ್ಲಾಡಿಸಿದನು ದಿನಕರ. ವ್ಯಕ್ತಿಯು ಒಳಗೆ ಕಾಲಿಟ್ಟು ಮೆಲ್ಲಗೆ ಮುಂದಡಿಯಿಟ್ಟಿತು. ಮುರಾರಿಯು ಅಲಕ್ಷ್ಯಭಾವದ ಚರ್ಯೆಯನ್ನು ತೋರ್ಪಡಿಸಹೋಗಿ, ತಲೆಯನ್ನು ಮೇಲಕ್ಕೆತ್ತಿ, ಯಾವುದೋ ಒಂದು ನಾಟಕದಲ್ಲಿನ ರಣಗೀತೆಯನ್ನು ಸಿಳ್ಳುಹಾಕಿದನು.

ಮುದುಕನು ಮುರಾರಿಯ ಬಳಿಗೆ ಬಂದು ನಿಂತು, ಒಂದು ನಿಮಿಷದ ತನಕ ಈ ವಿಕಾರ ಅಭಿನಯವನ್ನು ನೋಡಿ, ಹುಚ್ಚನೆಂದು ನೆನಸಿದರೂ ಕೊಂಚ ಅಳಿತೋರಿ—"ನಮಸ್ಕಾರ!" ಎಂದನು.

ಮುರಾರಿಯ ರಣಗೀತೆ ಫಕ್ಕನೆ ನಿಂತಿತು. ಅದರೊಂದಿಗೇ ಮಿಂಚಿನ ವೇಗದಿಂದ ಮುಖವೂ ಕೆಳಗಿಳಿಯಿತು. ತಟ್ಟನೆ ಕುರ್ಚಿಯಲ್ಲಿ ನೆಟ್ಟಗೆ ಕುಳಿತು—"ಹೊ ಹೊ ಹೊ ಹೊ! ಕುಳಿತುಕೊಳ್ಳಿರಿ! ತಮಗೆಲ್ಲಿ?" ಎಂದು ಪ್ರಶ್ನಿಸಿದನು. ಈತನಿಗೆ ೬೦ ವಯಸ್ಸು ದಾಟಿದೆಯೆಂದು ಖಂಡಿತವಾಗಿ ನಿರ್ಧರಿಸಿದನು. ವಯಸ್ಸು ನಲ್ವತ್ತೈದೆಂದು ಸುಳ್ಳು ಬರೆದನಲ್ಲಾ ಎಂದು ಆಶ್ಚರ್ಯಪಟ್ಟನು ಸತ್ಯ ನುಡಿದರೆ ಹುಡುಗಿ ತಪ್ಪೀತೆಂದು ಹೆದರಿರಬಹುದೆಂದೂಹಿಸಿದನು." ವಯಸ್ಸನ್ನು ಕಡಿಮೆಮಾಡಿ ಹೇಳುತ್ತಿರುವುದು ಮುದುಕರ ಒಂದು ಮರುಳು ಎಂದೂ ಆ ಮುದುಕನನ್ನು ಆಗಲೇ ಅಲ್ಲೇ ಮನಸಿನಲ್ಲೆ ಕ್ಷಮಿಸಿದನು.

"ನನ್ನದೊಂದು ಕಾಗದ ತಲಪಿರಬಹುದು" ಎಂದನು ಮುದುಕ.

"ಹೊ ಹೋ ಅಹುದು. ಖಂಡಿತ ತಲಪಿದೆ. ಸಂದೇಹವಿಲ್ಲ. ಅದಕ್ಕೆ?"

"ನಾನೇ ಬರುವೆನು ಎಂದು ಬರೆದಿದ್ದೆ. ಬಂದಿರುತ್ತೇನೆ."

"ಸಂಶಯವಿಲ್ಲ. ನೀವೇ! ಏನಾಗಬೇಕು?"

"ಹುಡುಗಿ........"

"ಅಹುದು, ಹುಡುಗಿ. ನಿಶ್ಚಯವಾಗಿ ಇರುವಳು. ೧೮ ವಯಸ್ಸು. ಬ್ರಾಹ್ಮಣ ತರುಣಿ. ಕಾಫಿ ತರಿಸಲೇ?"

"ಬೇಡ. ತರುಣಿಯನ್ನು ನೋಡಿ........"

"ನಿಜ. ನೋಡಿ ಆ ಮೇಲೆ ಬೇಕಾದ್ದನ್ನು ಬೇಕಾದಷ್ಟು ಕುಡಿಯಬಹುದು. ತಮ್ಮ ಹೆಸರು?"

"ನನ್ನ ಹೆಸರು........"

"ಕುಳಿತುಕೊಳ್ಳಿರಿ ಸ್ವಾಮಿ" ಎಂದನು ದಿನಕರ.

ಮುದುಕನು ಕುಳಿತುಕೊಂಡು ಕೋಣೆಯ ಗೋಡೆಗಳ ಕಡೆಗೆ ದೃಷ್ಟಿ ದೃಷ್ಟಿ ಪಸರಿಸಿದನು. ನಕ್ಷೆಗಳೆಲ್ಲ ಪ್ರಪಂಚದ ನಾನಾ ದೇಶಗಳ ತರುಣಿಯರವು. ಒಂದು ಕಡೆಯಲ್ಲೊಂದು ಮೇಜು. ಮೇಜಿನ ಮೇಲೆ ಪುಸ್ತಕ

ಗಳು, ಸಿಗರೇಟು ಪೆಕೇಟು, ಬೆಂಕಿಪೆಟ್ಟಿಗೆ, ಲೇಖನಿಗಳು ಅಸ್ತವ್ಯಸ್ತವಾಗಿ ಬಿದ್ದುಕೊಂಡಿವೆ. ನೋಡಿದರೆ—ಗೃಹಸ್ಥರ ಮನೆಯಂತಿಲ್ಲ. ಸಂದೇಹ ದಿಂದ—"ಹುಡುಗಿ" ಎಂದನು ಪುನಃ ವೃದ್ಧ ಉಮೇದ್ವಾರ.

"ಇದ್ದಾಳೆ. ಬನ್ನಿ!" ಎನ್ನುತ್ತ ಫಕ್ಕನೆ ಮುರಾರಿ ಎದ್ದನು. ಅವನ ಹೃದಯದಿಂದ ಭಯವೆಲ್ಲ ಇಷ್ಟರೊಳಗೇ ಹೋಗಿ, ಪುನಃ ವಿನೋದದ ತೆರೆ ಯೆದ್ದಿತು. ಹುಡುಗಿಯನ್ನು ನೋಡದೆ ಸ್ಪಷ್ಟವಾಗಿ ಮಾತಾಡಲಾರದ ವೃದ್ಧನ ಅವಸ್ಥೆಯನ್ನು ಕಂಡು ಆತನಿಗೆ ಕೊಂಚ ನಗುವೂ ಬರುವಷ್ಟಾ ಯಿತು. "ಬನ್ನಿ, ಸ್ವಾಮಿ! ಎಡವಿ ಬೀಳಬೇಡಿರಿ. ಹುಡುಗಿಯೊಡನೆ ಬಿರುಸಾಗಿ ಮಾತಾಡಬೇಡಿ. ನನ್ನ ದೊಡ್ಡಣ್ಣನ ಮಗಳು. ಒಬ್ಬಳೇ ಮಗಳು ಸ್ವಾಮಿ. ಮೊನ್ನೆ ಫಿಫ್ತ್‌ಫಾರ್ಮ್ ಪಾಸಾದಳಷ್ಟೆ. ಈ ವರ್ಷ ಬಹು ಮಾನವೂ ಇದೆಯಂತೆ—ಆಕೆಯ ಸಂಗೀತಕ್ಕೆ, ಭಾರೀ ಕಂಠ, ಸ್ವಾಮೀ! ಥೇಟು ಕೋಕಿಲೆಯ ಅಕ್ಕ! ಮದುವೆ ಮಾಡಿಬಿಡೋಣವೆಂದೆನಿಸಿತು. ಮತ್ತೆ ವರ್ಷ ಹೋದಂತೆ ವರರ ಧಾರಣೆ.....ಬನ್ನಿ ಬನ್ನಿ" ಎಂದು ನಡೆದನು.

ಎಲ್ಲ ಮಾತುಗಳನ್ನೂ ಆತುರದಿಂದ ನುಂಗುತಿದ್ದ ವೃದ್ಧನು ಎದ್ದು ನಿಂತು ಮುರಾರಿಯನ್ನು ಒಳಗೆ ಹಿಂಬಾಲಿಸಿದನು. ನಡುಗುತ್ತ ದಿನಕರನೂ ಹಿಂದೆಯೇ ಬರುತ್ತಲಿದ್ದನು, ಮೂವರೂ ಒಳಗೆ ಹೋದರು. ಆದರೆ.... ವಧುವೆಲ್ಲಿ?

"ಎಲ್ಲಿ ಹುಡುಗಿ!" ಎಂದನು ವೃದ್ಧ. ಹುಡುಗಿಯಿಲ್ಲ! ಕಿಟಕಿಯಿಂದ ಹಾರಿಹೋಗಿರಲಾರಳು. ಮೂವರೂ ಹುಡುಕಿದರು. ಏನಿದು!

"ಸರಸ್ವತೀ!" ಎಂದು ಕೂಗಿದನು ಮುರಾರಿ.

ಉತ್ತರವಿಲ್ಲ. ಮುರಾರಿಗೆ ಇದರರ್ಥವಾಗಲಿಲ್ಲ. ದಿನಕರನು ಮಂಕ ನಂತೆ ನೋಡುತ್ತಿದ್ದನು. ಫಕ್ಕನೆ ಮುರಾರಿಗೊಂದು ಆಲೋಚನೆ ಹೊಳೆ ಯಿತು. "ಸ್ವಾಮಿ, ನನ್ನ ಅಕ್ಕನೊಂದಿಗೆ ಸಿನಿಮಕ್ಕೆ ಹೋಗಿದ್ದಾಳೆ. ನಿಮಗೆ ಹೇಳಲಿಕ್ಕೆ ಮರೆತೆ!" ಎಂದನು.

ವೃದ್ಧನಿಗೆ ನಿರಾಶೆಯಾಯಿತು. "ನಾಳೆ ಬರಲೇ?" ಎಂದನು.

"ಅವಶ್ಯವಾಗಿ ನಾಳೆ ಬೆಳಿಗ್ಗೆ ೮ ಗಂಟೆಗೇ ಬನ್ನಿ. ಏಕೆ ಬರಬಾರದಂತೆ? ಬನ್ನಿ ಬನ್ನಿ—ನಾಳೆಯೇ ಬನ್ನಿ. ಇಲ್ಲೇ ಫಲಾಹಾರ ಮಾಡಬಹುದು."

ವೃದ್ಧನು ಇಳಿಮೋರೆಯಿಂದ ಹೊರಟುಹೋದನು.

* * * * *

ಬಾಗಿಲ ಎಡೆಯಿಂದ 'ಸರಸ್ವತಿ'ಯು ಹೊರಗೆ ಬಂದಳು(ನು). ಮುರಾರಿಯು ಸಿಡುಕಿನಿಂದ, "ಆಟವನ್ನೇ ಕೆಡಿಸಿಬಿಟ್ಟೆ! ಆ ವೃದ್ಧ ಬೋಳಪ್ಪನಿಗೆ......" ಎಂದೆನ್ನುತ್ತಿರಲು, ದುಃಖ-ಕ್ರೋಧಗಳಿಂದ ಕಲ್ಯಾಣಶಂಕರನು ಮುರಾರಿಯನ್ನು ಅರ್ಧದಲ್ಲಿಯೆ ತಡೆದು ಎಂದನು. "ಶ್! ಮಾತಾಡ ಬೇಡ. ಬಂದವರು ಯಾರು ಗೊತ್ತೇ?"

"ಯಾರು?"

"ನನ್ನ ತಂದೆ!"

* * * * *

ಅಂದೇ ರಾತ್ರಿ ದಿನಕರನು ಕೊಠಡಿಗಳಿಗೆ ಬೀಗವಿಕ್ಕಿ ಮುರಾರಿಯೊಡನೆ ನಡೆದನು. ಇನ್ನು ಆ ಕೊಠಡಿಗಳಲ್ಲಿರುವುದು ವಿಹಿತವಲ್ಲವೆಂದು ಕಲ್ಯಾಣ ಶಂಕರನ ಆಗ್ರಹ.

ಮೂವರೂ ಮಹಡಿಯ ಮೆಟ್ಟಲುಗಳನ್ನು ಮೌನವಾಗಿ ದುಃಖದಿಂದ ಇಳಿದುಬಂದರು. ರಸ್ತೆಗೆ ಇಳಿಯುತ್ತಲೇ ಕಲ್ಯಾಣಶಂಕರನೆಂದನು: "ವಿನೋದವು ವಿಷಾದವಾಯಿತು. ತಪ್ಪು ವೃತ್ತಪತ್ರಿಕೆಯದಲ್ಲ; ಟಪ್ಪಾಲಿನವರದೂ ಅಲ್ಲ. ನನ್ನದೇ!"

ಮುರಾರಿಯೂ ದಿನಕರನೂ ಮೌನವಾಗಿದ್ದರು. ಕಲ್ಯಾಣಶಂಕರನು ಮುಂದರಿಸಿದನು. "ಜಾಹೀರಾತಿಗೆ ಬೆಲೆಯಿದೆ. ಆದರೆ ಜಾಹೀರಾತಿನಲ್ಲಿ ವಿನೋದವಿರಬಾರದು; ವಂಚನೆಯಿರಬಾರದು. ಇದೊಂದೇ ಗಳಿಗೆಯಲ್ಲಿ ನನ್ನಲ್ಲಿ ಎಷ್ಟು ಮಾರ್ಪಾಟವಾಗಿದೆಯೆಂದು ನಿಮಗೆ ತಿಳಿದಿರಲಾರದು. ಇದು ನನ್ನ ತಂದೆಗೊಂದು ಪಾಠವಾಯಿತೆನ್ನಿ. ಆದರೆ ನನಗೆ.........ನಾನು ಇನ್ನಿದನ್ನು ಸಾಯುವತನಕ ಮರೆಯುವುದುಂಟೇ? ಬೇಕಾಗಿದೆ! ಬೇಕಾಗಿದೆ........ಬೇಕಾದುದೇನು ಗೊತ್ತೇ?

ಇಬ್ಬರೂ ಉತ್ತರ ಕೊಡಲಿಲ್ಲ.

ವಿಕಟನಗುವನ್ನು ನಗುತ್ತ ಕಲ್ಯಾಣಶಂಕರನೇ ಉತ್ತರ ಕೊಟ್ಟನು: "ನಮಗೆ ಕಾಲಾಣೆ ತೂಕ ಮಿದುಳು!"

---

# ೧೩. ಗಣಿತಶಾಸ್ತ್ರಜ್ಞ

ಕದ್ರಿಯಲ್ಲಿ ಬಸ್ ಹತ್ತಿದ, ಆ ಮಾರಾಯ! ಅವನನ್ನು ನೋಡು ವಾಗ, ಆಶಾಜನಕ ಚಿಹ್ನವೇನೂ ಇಲ್ಲ. ಹಲವು ಸಾವಿರ ವರುಷಗಳಿಂದ ಕಾಯಿಲೆಯಲ್ಲಿದ್ದನೋ ಎಂಬ ಹುಚ್ಚು ಕಲ್ಪನೆಯಾದೀತು. ತಲೆ ಮಾತ್ರ ಬೆಳೆದು, ಬಿದಿರು ಕೋಲಿನ ಮೇಲೆ ದೊಡ್ಡ ಮಡಕೆ ಹಿಡಿದಂತಿತ್ತು. ಯಾವ ಕ್ಷಣಕ್ಕೂ ಅದು ಮುರಿದುಬೀಳುವುದೊ ಎಂದೂ ಭಯವಾದೀತು. ದೊಡ್ಡ ಕಣ್ಣುಗಳೆರಡನ್ನೂ ದೇವರು ಈ ಅದ್ಭುತ ಮನುಷ್ಯನಿಗೆ ದಯಪಾಲಿಸಿದ್ದನು.

ಬಂದವನೇ, ನನ್ನ ಬಳಿ ಕುಳಿತು, “ತಾವು ಎಲ್ಲಿಗೆ?” ಎಂದನು.

“ರಥಬೀದಿಗೆ!” ಎಂದೆ.

“ನಿತ್ಯವೂ ಕದ್ರಿಯಿಂದ, ಸರಾಸರಿ ೫೭೫ ಮಂದಿ ರಥಬೀದಿ ಕಡೆಗೆ ಹೋಗುವರು” ಎಂದನು.

ಕೇಳಿ, ನನಗಾಶ್ಚರ್ಯವಾಯಿತು. ಎಷ್ಟು ಖಚಿತವಾಗಿ ಹೇಳುತ್ತಾನೆ! ಎಂತಹ ಗಣಿತ! ಮಾತ್ರ--ಏಕೆ ಇವನು ಹೀಗೆ ಲೆಕ್ಕಹಾಕಿದನು ಮತ್ತು ನನಗೂ ಹೇಳಿದನು, ಅದು ಮಾತ್ರ ತಿಳಿಯಲಿಲ್ಲ.

ಅವನ ಮಾತುಗಳಿಂದ ನನ್ನಲ್ಲೇನು ಪರಿಣಾಮವಾಯಿತೆಂದು ಕೇಳಲು ಅವನು ಕಾಯಲಿಲ್ಲ. “ರಥಬೀದಿಯಿಂದ ೫೫೦ ಮಂದಿ ಈ ಕಡೆಗೆ ಬಂದ ಲೆಕ್ಕವಿದೆ!” ಎಂದನು.

“ಉಳಿದವರು?”—ನಾನು ಕೇಳಿದೆ.

“ಪರಮಾತ್ಮನಿಗೆ ಗೊತ್ತು,” ಎನ್ನುತ್ತ, ಒಂದು ನಿಮಿಷ ತಡೆದು, “ವಾರಕ್ಕೆ ಐದು ಮಂದಿ ಈ ನಗರದಲ್ಲಿ ಕ್ಷಯರೋಗದಿಂದ ಸಾಯುವರು” ಎಂದ.

“ಭಯಂಕರ” ಎಂದೆ.

“ಭಯ–ಸಂತೋಷಗಳೊಂದನ್ನೂ ನಾನರಿಯೆ. ಸರಾಸರಿ ಸಂಖ್ಯೆ ಬಲ್ಲೆ. ಐದು ಮಂದಿ ಕ್ಷಯದಿಂದ ಸತ್ತರೆ ಮತ್ತೆ ಇಪ್ಪತ್ತು ಮಂದಿ ವಿಷಮಜ್ವರ, ಸಿಡುಬು, ಹೆರಿಗೆ ಮೊದಲಾದ ಕಾರಣಗಳಿಂದ ಸಾಯು ವರು” ಎಂದ.

"ನಗರವು ನಶಿಸುತ್ತ ಬಂತಲ್ಲ!" ಎಂದೆ.

"ಚೂರಿಲ್ಲ, ದಿನಕ್ಕೆ ಮೂವತ್ತೆರಡು ಜನನಗಳು ತಪ್ಪದೆ ಆಗುತ್ತಿವೆ" ಎಂದ.

ಸಂತೃಪ್ತಿಯ ನಿಟ್ಟುಸಿರಿಟ್ಟೆ.

"ಜಿಲ್ಲೆಯಲ್ಲಿ ಪ್ರತಿ ದಿನ, ಮೂರು ಖಂಡಿ ಹೂ, ಹೆಂಗುಸರ ತಲೆಯನ್ನಲಂಕರಿಸಿ, ಬಾಡಿ, ವ್ಯರ್ಥವಾಗುತ್ತಿದೆ" ಎಂದ.

"ಹಣ?"—ನಾನು ಕೇಳಿದೆ.

"ಹಣದ ಮಾತಿಲ್ಲ, ಅಷ್ಟೂ ಹೂವನ್ನು ಗಿಡಿಗಳಲ್ಲೆ ಬಿಟ್ಟಿದ್ದರೆ, ಮತ್ತೆರಡು ದಿನ ನಲಿದು, ಸುಗಂಧ ಬೀರಿ, ಮೂರುಸಾವಿರ ಪ್ರಾಣಿಗಳಿಗೆ ಅವಶ್ಯವಿರುವಷ್ಟು ಸ್ವಚ್ಛ ಹವೆಯನ್ನು ನಿರ್ಮಿಸಿದಂತಾಗುತ್ತಿತ್ತು"—ಎಂದ.

ನನಗೆ ನಾನೇ ಅಪರಾಧಿಯಂತೆ ಕಂಡಿತು. ಈ ತನಕ ನಾನು ಮಾರಾಣಿಗೆಂದು ಒಯ್ದ ಹೂ ಮೂರು ಖಂಡಿಗೆ ಮಿಕ್ಕಿತ್ತು. ಮೂರು ಸಾವಿರ ಮಂದಿಯ ಕೊಲೆಮಾಡಿದ ಪಾಪ ನನ್ನ ತಲೆ ಮೇಲೆ!

ಮಾರಾಯ ಎಚ್ಚರಿಸಿದ. "ನಗರದಲ್ಲಿ ದಿನಂಪ್ರತಿ ಕಟ್ಟಲ್ಪಡುವ ಬೀಡಿಗಳು ಹದಿನೈದು ಲಕ್ಷ ಮೂವತ್ತೇಳು ಸಾವಿರದಾರನೂರೆಂಬತ್ತೆಂಟು!"

ಪುನಃ ಎಂತಹ ಸ್ವಚ್ಛ ಲೆಕ್ಕ!

"ಅಷ್ಟು—ಅಲ್ಪವೇ?" ನಾನು ಕೇಳಿದೆ.

"ಅಷ್ಟೆ! ಹದಿನೈದು ಲಕ್ಷ ಮೂವತ್ತೇಳು ಸಾವಿರದಾರನೂರೆಂಭತ್ತೆಂಟು ಜಿರಳೆಗಳನ್ನು ಕೊಲ್ಲುವ ವಿಷ ಅದರಲ್ಲಿದೆ. ಇದರ ನೂರನೇ ಒಂದಂಶ ಜೀವನಯಾತ್ರೆ ಮುಗಿಸುವಷ್ಟು"—ಎಂದ.

ಬೀಡಿ ಅಂಗಡಿಗಾರರು, ಪ್ರತಿನಿತ್ಯ ಎಷ್ಟು ಮಂದಿಯನ್ನು ಕೊಂದಂತಾಯಿತು! ಸರಕಾರ ಇದನ್ನು ನಿಲ್ಲಿಸಿಲ್ಲವೇಕೊ!

"ಕಾಫಿಯೋ?"—ಪ್ರಶ್ನಿಸಿದೆ.

"ಒಬ್ಬನು ಒಂದು ತಿಂಗಳಿಗೆ ಕುಡಿದ ಕಾಫಿಯಲ್ಲಿ, ಐದು ಮಂದಿಯ ಹೃದಯಸ್ತಂಭನ ನಿಲ್ಲಿಸುವಷ್ಟು 'ಕೆಫಿನ್' ಇದೆ."

"ಸಾರಾಯಿಯೋ?"

“ಒಬ್ಬ ಒಳ್ಳೆ ಕುಡಿಕನು ಪಾನಮಾಡುವ ಮದ್ಯದಲ್ಲಿರುವ ವಿಷದಿಂದ ಶುದ್ಧ ನೆತ್ತರಿನ ೧೦ ವರ್ಷದ ಒಬ್ಬ ಬಾಲಕನನ್ನು ಕೊಲ್ಲಬಹುದು!”

ನನಗೆ ಉಸಿರುಕಟ್ಟಿದಂತಾಯಿತು.

ಮಾರಾಯ ಮುಂದುವರಿದ: “ಒಂದು ದಿನಕ್ಕೆ ನಗರದ ಕಾಫಿ ಹೊಟೇಲುಗಳಲ್ಲಿ, ಚಟ್ನಿಗೆಂದು ೧೩೭ ತೆಂಗಿನಕಾಯಿಗಳು ವ್ಯರ್ಥವಾಗುತ್ತಿವೆ ”

“ಆದರೆ, ಚಟ್ನಿಯೊಂದು ಅವಶ್ಯ...........” ಎಂದೆ.

“ಕೇವಲ ನಾಲಗೆಯ ಮಾತು--ವಿನಾ ಅವಶ್ಯ ಇಲ್ಲವೇ ಇಲ್ಲ” ಎನ್ನುತ್ತ—“ಮನುಷ್ಯನು ಸರಾಸರಿ ಒಂದು ದಿನಕ್ಕೆ ತಿನ್ನುವ ಆಹಾರದಲ್ಲಿ ನಾಲ್ಕನೇ ಮೂರಂಶ ಆಹಾರವು ಕೇವಲ ನಿರರ್ಥಕ” ಎಂದ.

“ಹಾಗಾದರೆ, ಕೆಲವರು ಹೆಚ್ಚಿಗೆ ತಿಂದು ಹಲವರು ಹೊಟ್ಟೆಗಿಲ್ಲದೆ ನರಳುವಂತಾಯಿತು, ಅಲ್ಲವೇ?” ನಾನು ಕೇಳಿದೆ.

“ಅದು ನನಗರಿಯದು...........ದಿನಕ್ಕೆ ಒಬ್ಬ ಮನುಷ್ಯನು ಸರಾಸರಿ ಮುನ್ನೂರು ಮಾತುಗಳನ್ನಾಡುವನು. ಈ ಸಂಖ್ಯೆಯನ್ನು ಅವನು ಅರ್ಧಕ್ಕರ್ಧ ಇಳಿಸಿದರೆ, ಆರೋಗ್ಯಕ್ಕೆ ಹಿತವಿದೆ” ಎಂದ.

“ತಾವು...........?” ಕೇಳಿದೆ.

“ನಾನು? ತಮ್ಮ ಪ್ರಶ್ನೆ ತಿಳಿಯಿತು. ನಾನು ೧೫೦ಕ್ಕಿಂತ ಹೆಚ್ಚು ಮಾತುಗಳನ್ನಾಡುವುದಿಲ್ಲ. ಹಾಗೆಲ್ಲಾದರೂ ತಪ್ಪಿ ಹೆಚ್ಚಿಗೆ ಮಾತಾಡಿದರೆ, ಮರುದಿನ ಕಡಿದು, ಸರಿಗೊಳಿಸುತ್ತೇನೆ” ಎಂದ.

“ತಾವು ಅದ್ಭುತ ಮನುಷ್ಯ! ನಿಮ್ಮ ಸಂಖ್ಯೆಗಳೂ ಅದ್ಭುತ ಇವೆ!” ಎಂದೆ.

“ನಾನು ಯಾವ ಕಾಲದಲ್ಲೂ ತಪ್ಪು ಗಣಿತ ಹೇಳಲಾರೆ. ಬಹು ವರ್ಷಗಳ ಶ್ರಮದ ನಂತರ ಈ ರೀತಿ ಅಂಕೆಸಂಖ್ಯೆಗಳನ್ನು ಒಟ್ಟುಗೂಡಿಸಲು ಕಲಿತಿದ್ದೇನೆ”—ಎಂದ.

“ಸಂತೋಷ”—ಎಂದೆ.

“ಸಂತೋಷ—ನಿಮಗಾಗಬಹುದು; ನನಗಿಲ್ಲ. ನಾನು ಸಂತೋಷ-ದುಃಖಗಳೆರಡನ್ನೂ ಅರಿಯೆ. ಸಂಖ್ಯೆಗಳನ್ನು ಮಾತ್ರ ಬಲ್ಲೆ” ಎಂದ.

"ತಾವು ಕೊಟ್ಟ ಅಂಕೆಸಂಖ್ಯೆಗಳಿಗಾಗಿ ಕೃತಜ್ಞನು. ಇನ್ನೂ ಕೇಳ ಬಹುದಿತ್ತು, ಆದರೆ, ನನಗೆ ರಥಬೀದಿಯಲ್ಲಿ ಇಳಿಯಬೇಕಾಗಿದೆ" ಎಂದೆ. (ರಥಬೀದಿ ಸಮೀಪಿಸಿತ್ತು.)

"ನೀವು ಕೇಳಿದರೂ ಕೇಳದಿದ್ದರೂ ನನಗೇನೂ ಇಲ್ಲ. ಹೇಳಬೇಕಾದಾಗ ಹೇಳುತ್ತೇನೆ" ಎಂದ. ಮತ್ತೆ, ಒಂದು ನಿಮಿಷ ತಡೆದು, "ಪ್ರತಿವಾರ, ಈ ನಗರದಲ್ಲಿ ಒಂದು ದುರ್ಮರಣವಾಗುತ್ತದೆ. ಈ ವಾರ...........ಆಗಿಲ್ಲ! ಅದು ಆಗಲೇ ಬೇಕು!" ಎಂದ.

ನನಗೆ ವಿಚಿತ್ರ ಕಂಡಿತು; ಏಕೋ ಸ್ವಲ್ಪ ಭಯವೂ ಆಯಿತು! "ದುರ್ಮರಣ...............ಏಕೆ ಆಗಲೇ ಬೇಕು?" ಎಂದು ಕೇಳಿದೆ.

"ಆಗಲೇ ಬೇಕು. ಇಲ್ಲದಿದ್ದರೆ ನನ್ನ ಲೆಕ್ಕ ತಪ್ಪುತ್ತದೆ. ಹಲವು ವರ್ಷಗಳ ಪರಿಶ್ರಮದಿಂದ ಅಂಕೆಸಂಖ್ಯೆಗಳನ್ನು ಕೂಡಹಾಕಲು ಕಲಿತಿದ್ದೇನೆ. ನನ್ನ ಲೆಕ್ಕ ತಪ್ಪಲಾರದು! ತಪ್ಪಲೇ ಬಾರದು...........ಇಂದು ಶನಿವಾರ. ವಾರದ ಕೊನೆಯ ದಿನ! ಸಾಯಂಕಾಲವಾಗುತ್ತ ಬಂತು! ಐದೂವರೆ ಘಂಟೆ ದಾಟಿತು! ಆರು ಘಂಟೆಯೊಳಗೆ ಒಂದು ದುರ್ಮರಣವಾಗದಿದ್ದರೆ ನನ್ನ ಲೆಕ್ಕ ತಪ್ಪುತ್ತದೆ" ಎಂದ.

ಹೇಳುತ್ತಿದ್ದಂತೆ ಅವನ ಮುಖ ವಿಕಾರವಾಗುತ್ತ ಬಂತು. ಆ ದೊಡ್ಡ ಕಣ್ಣುಗಳು ದೊಡ್ಡ ಮುಖದ ಮೇಲೆ ಕೆಂಪಗಿನ ಗೋಲಿಗಳಂತೆ ತಿರುಗಿದುವು. ಉನ್ಮಾದಗೊಂಡವನಂತೆ ಕಂಡನು. ನನಗೆ ಭಯ ಹೆಚ್ಚಿತು.

"ತಾವು ಸಮಾಧಾನಹೊಂದಬೇಕು. ಈ ನಗರದ ಯಾವುದಾದರೂ ಮೂಲೆಯಲ್ಲಿ ಯಾರಾದರೂ ಏನಾದರೂ ಸಂಭವಿಸಿ, ಹೇಗಾದರೂ........' ಎಂದೆ.

ವಿಚಿತ್ರ ಮನುಷ್ಯ ಫಕ್ಕನೆ ನನ್ನ ಕಡೆಗೆ ತಿರುಗಿ, "ಯಾವುದಾದರೂ— ಹೇಗಾದರೂ — — ಏನಾದರೂ" ಎಂದು 'ಆದರು'ಗಳನ್ನು ಸುರಬೇಡಿ. ನಾನು ಖಂಡಿತ ತಿಳಿವ, ಖಂಡಿತ ಹೇಳುವ, ಖಂಡಿತ ಕಾಣುವ ಮನುಷ್ಯ. 'ಆದರು'ಗಳಿಗೆ ನನ್ನಲ್ಲಿ ಸ್ಥಾನವಿಲ್ಲ. 'ಆಗಲೇ ಬೇಕು'ಗಳು ನನ್ನ ಲೆಕ್ಕ!"

........ಎನ್ನುತ್ತಿರುವಾಗ ಬಸ್ಸು ರಥಬೀದಿಗೆ ತಿರುಗುತ್ತಿರುವಾಗಲೇ— ನೆಟ್ಟನೆ ಕೆಳಗಿಳಿದು, ಅದರಡಿಗೆ ಬಿದ್ದ!

ಗದ್ದಲವೇ ಗದ್ದಲ! ಚಕ್ರವು ನೇರಾಗಿ ಕುತ್ತಿಗೆಯ ಮೇಲಿಂದ ಹಾದು ಹೋಗಿತ್ತು! ನಾರಾಯನ ಶ್ವಾಸವು ನಿಂತಿತ್ತು!

ಅವನ ಗಣಿತ ತಪ್ಪಲಿಲ್ಲ! ಗಣಿತ ಶಾಸ್ತ್ರಕ್ಕೆ ಇವನಿಂದಲೂ ಹೆಚ್ಚು ಸೇವೆ ಸಲ್ಲಿಸಿದ ಪಂಡಿತರು ಇರಲಾಪರೇ? ಮರಣಪಟ್ಟರೂ ಅಮರನೆನಿಸುವ ಗಣಿತಜ್ಞರಿದ್ದರೆ, ಇವನವರಿಗೆ ಅರಸು!

ಅವನ ಆತ್ಮಕ್ಕೆ ಶಾಂತಿಯಿರಲಿ!

---

# ೧೪. ಕೆಲೆಂಡರ್ ಬೇಟೆ!

ನಮ್ಮ ನೆರೆಕರೆಯವರಿಗೆಲ್ಲಾ "ಆನೆಕಾಲು." ಪ್ರಮಾದವಶಾತ್ ನಾನೊಂದು ದಿನ ತಣ್ಣೀರು ಕುಡಿದು ಮುಗಿದಾಗ ನಮ್ಮ ಅತ್ತೆಯ ಪ್ರತಿರೂಪಿ "ಅಯ್ಯೋ! ಬಿಸಿ ಮಾಡದ ನೀರೇ? ಕಾಲು........!" ಎಂದಳು. ಮುಂದಿನ ಶಬ್ದಗಳು ಮಾನವಕೋಟಿಗೆ ಭೂಷಣವಾದುದಲ್ಲ. ಅಂದಿನಿಂದ ಪ್ರತಿರಾತ್ರಿ, ಬೆಳಗ್ಗಿನ ತನಕ ನನ್ನ ಕಾಲುಗಳನ್ನು ಮುಟ್ಟಿ ನೋಡಿ ಎಷ್ಟು ಬೆಳೆದಿವೆ ಎಂದು ನೋಡೋದೇ! ಬೆಳಗ್ಗಿಂದ ರಾತ್ರಿ ತನಕ........

........ಅದೀಗ ಪ್ರಸ್ತುತ ವಿಚಾರ. ಕಳೆದೊಂದು ತಿಂಗಳಿಂದ, ಮೂವತ್ತು ರಾತ್ರಿಗಳನ್ನು, ಆ ರಾಜಮೃಗಪಾದಸ್ಮರಣೆಯಲ್ಲಿ ಕಳೆವುದ ಕ್ಕಿಂತಲೂ ಹೆಚ್ಚಿನ ಸಂಕಟವು, ಹಗಲಲ್ಲಿ ಪ್ರಾಪ್ತವಾಗುತ್ತಿದೆ. ಮಧ್ಯಾಹ್ನ ಹನ್ನೆರಡರ ತನಕ ಕಾಲಾಣೆಯ ಗಿರಾಕಿಯೂ ಕಾಣಲೊಲ್ಲನೇಕೆ ಎಂದು ಆಶ್ಚರ್ಯಪಡುತ್ತಿರುವಾಗಲೆಲ್ಲ, ಬೊಂಬಾಯಿಯ ವಿಕ್ಟೋರಿಯಾ ರೈಲ್ವೆ ನಿಲ್ದಾಣದಲ್ಲಿ ಐದು ನಿಮಿಷಕ್ಕೊಂದು ರೈಲುಬಂಡಿ ಬಂದು ಹೋಗುತ್ತಿರು ವಂತೆ ಕೆಲೆಂಡರ್ ಬೇಟೆಗಾರರು ಬಂದು, ಕಿಸಕ್ಕನೆ ಟೊಳ್ಳು ನಗು ನಕ್ಕು, "ಕೆಲೆಂಡರ್ ಇಲ್ಲವೆ?" ಎಂದು ಕೇಳುವರು. ರಾಜಮೃಗಪಾದಕೀಟಪೂರಿತ ಜಲಾಶಯದ ವಠಾರದಲ್ಲಿ ಒಂದು ದಿನ ಫಕ್ಕನೆ ತಣ್ಣೀರು ಕುಡಿದುದು ಯಾವ ತಾರೀಕಿನಲ್ಲೆಂದು ಗುರುತು ಹಾಕಿಡುವಷ್ಟಕ್ಕೆ ಒಂದು ಕೆಲೆಂಡರ್ ನನ್ನೊಡನೆ ಇಲ್ಲ, ಯಾರೂ ಕೊಟ್ಟುದೂ ಇಲ್ಲ. ಹೀಗಿದ್ದಾಗ, "ಕೆಲೆಂಡರ್ ಇಲ್ಲವೇ?" ಎಂದು ಕೇಳುವವರಿಗೆ ಏನೆನ್ನಬೇಕು?

ಸುಲಭವಿದೆ—ಎಂದು ನೀವು ಹೇಳಬಹುದು. "ಇಲ್ಲ!" ಎಂದರಾಯಿತು—ಅಲ್ಲವೇ? ಇಲ್ಲ! ನೂರು ಬಾರಿಗೂ ಇಲ್ಲ! "ಇಲ್ಲ"ವೆಂದು ನಾನಂದೆ. ಅದಕ್ಕೆ,—

"ಇಲ್ಲ?"

"ಇಲ್ಲ."

"ಏಕೆ ಇಲ್ಲ?"

"ಇಲ್ಲ!"

"ಮಾಡಿಸಲಿಲ್ಲವೇ?"

"ಇಲ್ಲ."

"ಏನು ಮಾಡಿಸಲಿಲ್ಲ?"

"ಇಲ್ಲ."

"ಕಳೆದ ವರ್ಷ ಮಾಡಿಸಿದ್ದಿರಲ್ಲವೇ?"

"ಇಲ್ಲ!"

"ಮಾಡಿಸಿದ್ದಿರಿ; ನನಗೊಂದು ಕೊಟ್ಟಿದ್ದಿರಿ!"

"ಇಲ್ಲ!"

"ಅದೇನು ಇಲ್ಲ?"

"ಇಲ್ಲ!"

ಕೆಲೆಂಡರ್ ಗಿರಾಕಿ ಅಲ್ಲಿಗೆ ಸೋತನೆಂದು ನಿಮ್ಮ ಎಣಿಕೆ. ಆದರೆ, ಕದಲಲಿಲ್ಲ.

"ಏನಿಲ್ಲ? ಏಕಿಲ್ಲ? ಒಟ್ಟು ಇಲ್ಲ?" ಎಂದ.

"ಇಲ್ಲ" ಎಂದೆ.

"ನಿಮಗೆ ಬೇರೆ ಭಾಷೆಬಾರದೇ?" (ನಗುತ್ತ!)

"ಇಲ್ಲ." (ನಗವೆ!)

"ನೀವೇನು ಇಂದು "ಇಲ್ಲ"ದ ಜಗಳಕ್ಕೆ ಹೊರಟಿದ್ದೀರಿ?"

"ಇಲ್ಲ."

"ಈ 'ಇಲ್ಲ'ವನ್ನು ಮುಗಿಸಿ, ಒಂದು ಕೆಲೆಂಡರ್ ಕೊಟ್ಟುಬಿಡಿ."

"ಇಲ್ಲ."

ನಿಮಗೆ ವಿಶೇಷ ಕಾಣಬಹುದು, ನಾನಂದು ಸುಮಾರು ಮೂವತ್ತು "ಇಲ್ಲ'ಗಳನ್ನು ಒಬ್ಬನಿಗೇ ಸಲಿಸಿದೆ. "ನಿಮಗೇನೋ ವಿನೋದ. ಇರಲಿ, ನಾಳೆ ಬರುವೆನು!" ಎಂದು ಹೇಳಿ ಹೋದ. ಹಾಗಾದರೆ, "ಇಲ್ಲ"ಗಳಿಂದ ಕೆಲೆಂಡರ್ ಬೇಟೆಯನ್ನು ತಪ್ಪಿಸಲಾಗುವುದಿಲ್ಲ!

ಗಿರಾಕಿ ಇಲ್ಲದಿದ್ದರೂ ಕೆಲೆಂಡರ್ ಗಿರಾಕಿಗಳಿರುವರೆಂದು ಕೌತುಕ ಗೊಂಡು, ಮಧ್ಯಾಹ್ನದ ಊಟಕ್ಕೆ ಹೊರಟೆ. ದಾರಿಯಲ್ಲೆಲ್ಲ ಯೋಚನೆ. ಅಷ್ಟರಲ್ಲೆ ಡಬ್ಬನೆ ಬೆನ್ನಿಗೊಂದು ಗುದ್ದು ಬಿತ್ತು. ಹೌಹಾರಿ, ಹಿಂದೆ ನೋಡಿದೆ. ಒಂದು ವಿಚಿತ್ರ ವ್ಯಕ್ತಿ! ಇತಿಹಾಸ ಪೂರ್ವದ ಪ್ರಾಣಿಯ ಶೇಷ ವೆಂದು ಉಳಿದ ಆ ರಾಜಮೃಗದಂತೆ ಬೆಳೆದು, ಆ ಪ್ರಾಣಿಯಂತೆ ತಾನೂ ಶ್ಮಶ್ರುವಿಹೀನನಾಗಿ, ಸೊಂಡಿಲಿನ ಬದಲಾಗಿ ಒಂದು ಕಾಗದದ ಸುರುಳಿ ಯನ್ನು ಬಾಯಿಗೆ ಹಿಡಿದು "ಫು ಫು ಫು" ಎನ್ನುತ್ತ ನಗುತ್ತಿದ್ದ ಮಾರಾಯ! ನಾನು ಆತನನ್ನೂ ಅವನು ನನ್ನನ್ನೂ ಚೆನ್ನಾಗಿ ನೋಡಿದೆವು. ನನಗರ್ಥ ವಾಗಲಿಲ್ಲ.

"ಏಕೆ ಹೊಡೆದಿರಿ? ನಾನೇನಾದರೂ ಮಾಡಿದ್ದೇನೆಯೇ, ಅನ್ಯಾಯ?"

"ಸಾಕು ಬಿಡಿ, ಗುರುತಿಲ್ಲವೇ?"

"ಇಜಿಪ್ಟ........"

"ಅಲ್ಲ!"

"ಇಜಿಪ್ಟ........"

"ಅಲ್ಲ, ಅಲ್ಲ!"

"ಇಜಿಪ್ಟ ಪಿರೆಮಿಡ್ಡನ್ನು ನೋಡಿದಷ್ಟೆ ಆಶ್ಚರ್ಯವಾಗಿದೆ" ಎಂದು, ಒಂದೇ ಬಾರಿ ಊದಿಬಿಟ್ಟೆ.

ವ್ಯಕ್ತಿ ನನ್ನೆದೆ ಒಡೆವಷ್ಟು ಗಟ್ಟಿಯಾಗಿ ನಕ್ಕು, ಒಡೆಯದೆ ಉಳಿದ ಎದೆಯ ಭಾಗವನ್ನು ಚೂರು ಮಾಡಲು ಧಡ್ಡೆಂದು, ಸುರುಳಿ ಮಾಡಿದ ಕೆಲೆಂಡರಿನಿಂದ ನನ್ನ ಎದೆಯ ಮೇಲೆ ಹೊಡೆಯುತ್ತ, "ಗೊತ್ತಿಲ್ಲವೇ........ ಶಿಬ್ಬು!" ಎಂದಿತು.

"ಶಿಬ್ಬು?" ನನಗಾಶ್ಚರ್ಯ! "ಯಾವ ಶಿಬ್ಬು?"

"ಶಿಬ್ಬು ಗೊತ್ತಿಲ್ಲವೇ?"

"ಅದೊಂದು ತರಕಾರಿಯೇ?"

"ಛೇ. ಶಿಬ್ಣು ಎಂದರೆ ನಾನು!"

"ನೀವು!"

"ಅಹುದು ನಾನೇ! ಹೇಗಿದ್ದಿರಿ ನೀವು?"

"ಇದ್ದೇನೆ."

"ಹೇಗೆ ವ್ಯಾಪಾರ?"

"ಆಗುತ್ತಿದೆ."

"ಒಳ್ಳೇದು. ಮತ್ತೇನು ವಿಶೇಷ?"

"ಏನಿಲ್ಲ."

"ನೀವು ಕೆಲೆಂಡರ್ ಮಾಡಿಸಲಿಲ್ಲವೇ?"

"ಇಲ್ಲ."

"ನನಗೆ ಕೊಟ್ಟಿಲ್ಲ."

"ನಾನು ಮಾಡಿಸಿಲ್ಲ, ಆದಕಾರಣ ಕೊಟ್ಟಿಲ್ಲ, ಬೇರೆ ಕಡೆಯಿಂದ ನನಗೆ ದೊರೆತಿಲ್ಲ, ನಾನಾಗಿ ಹೋಗಿ ಎಲ್ಲಿಯೂ ಕೇಳಿಲ್ಲ, ಈ ವರುಷಕ್ಕೆ ಇಲ್ಲ" ಎಂದು ಒಂದೇ ಬಾರಿಗೆ ಹೇಳಿ,........

"ನಾನು ಮಾಡಿಸಿದ್ದರೂ, ತಾವಾರೆಂದು ನನಗರಿಯದೆ ಹೇಗೆ ಕೊಡುತಿದ್ದೆನೋ ಗೊತ್ತಿಲ್ಲ'' ಎಂದು ಮುಗಿಸಿದೆ.

ಮನುಷ್ಯ ಸಪ್ಪಗಾಗಲಿಲ್ಲ. ಒಂದಂಗುಲವೂ ಕದಲದೆ, ಕಣ್ಣುಗಳನ್ನು ವಿಶಾಲವಾಗಿ ತೆರೆದು, "ಏನು, ನಾನಾರೆಂದು ಗೊತ್ತಿಲ್ಲವೇ? ಶಾಲೆಯಲ್ಲಿ ನಾವು ಒಟ್ಟಿಗೆ ಗೋಲಿ ಆಡಿಕೊಂಡಿದ್ದು, ಒಬ್ಬರಿನ್ನೊಬ್ಬರನ್ನು ಬಿಟ್ಟು ಹಾಕಬಾರದೆಂದು ನಿತ್ಯವೂ ಶಪಥಮಾಡಿಕೊಳ್ಳುತ್ತಿರಲಿಲ್ಲವೇ?" ಎಂದ.

"ಇಲ್ಲ, ನೆನಪಿಲ್ಲ," ಎಂದೆ.

"ನೆನಪಿಲ್ಲ?"

"ಇಲ್ಲ! ಇದ್ದರೂ, ನಾವು ಹಿಡಿದುಕೊಂಡಿಲ್ಲವಾದ್ದರಿಂದ ಬಿಟ್ಟು ಕೊಡುವ ಪಾಪ ಮಾಡಲಿಲ್ಲ." ಎಂದು ನಗುತ್ತ ಹೇಳಿದೆ.

"ಎಂಥ ತತ್ತ್ವಜ್ಞಾನಿ ಆಗಿದ್ದಿಯೆ ನೀನು!"ಎಂದು ನನ್ನ ಗೋಲಿ ದೋಸ್ತಿ ಏಕವಚನದಿಂದ ಸಂಬೋಧಿಸಿ, ಶಾಭಾಸ್‌ಗಿರಿಯಿಂದ ನನ್ನ ಬೆನ್ನುತಟ್ಟಿದ.

ಮನೆಗೆ ಹೋಗುತ್ತಿರುವಾಗಲೆಲ್ಲ ನನಗೆ ಈ ಹೊಸ ಚಿಂತೆ; ಒಬ್ಬರಿನ್ನೊಬ್ಬರನ್ನು ಬಿಟ್ಟುಹಾಕಬಾರದೆಂದು ಶಪಥ ಮಾಡಿಕೊಂಡ ಈ ದೋಸ್ತಿ ಯಾರು? ಈ ತನಕ ಹೊಳೆದಿಲ್ಲ!

ಊಟಮಾಡಿ ಕೈ ತೊಳೆವಾಗ ಹೊರಗೆಲಸದ ಹೆಂಗುಸು ಕೇಳಿದಳು: "ಕೆಲೆಂಡರ್ ಮಾಡಿಸಲಿಲ್ಲವೆ ರಾಯರೇ?

"ಇಲ್ಲ."

ಎರಡೂವರೆ ಗಂಟೆಗೆ ಅಂಗಡಿಗೆ ಹೊರಟೆ. ದಾರಿಯಲ್ಲಿ ಕಪ್ರಗಿನ ವ್ಯಕ್ತಿಯೊಂದು "ನಮಸ್ಕಾರ ಅಯ್ಯಾ" ಎಂದಿತು. "ನಮಸ್ಕಾರ"ವೆಂದೆ.

"ಕೆಲೆಂಡರ್........?"

"ಇಲ್ಲ."

"ನನ್ನ ಪರಿಚಯವಿಲ್ಲವೇ?"

"ಇಲ್ಲ."

"ನಾನು ಹಜೂರ್‌ಕಛೇರಿ........"

"ನೀನು ಹಜೂರ್‌ಕಛೇರಿಯೆಂದು ನಾನು ನಂಬುವುದಿಲ್ಲ. ನನ್ನೊಡನೆ ಕೆಲೆಂಡರ್ ಇಲ್ಲ!" ಎನ್ನುತ್ತ, ಬೇಟೆನಾಯಿಗಳು ಓಡಿಸಿಬಂದಂತೆ, ಇನ್ನಾರ ಬಾಧೆಯೂ ಬರಬಾರದೆಂದು ಅಂಗಡಿಗೆ ನಾಗಾಲೋಟವಿಟ್ಟೆ.

ಅಂಗಡಿಯ ಜಗುಲಿಯಲ್ಲಿ, ಹಳೆ ಪರಿಚಿತ ಬ್ಯಾರಿ ಕುಳಿತಿದ್ದನು.

"ಸಲಾಮ್."

"ಸಲಾಮ್."

"ಕೆಲೆಂಡರ್........!

"ಇಲ್ಲ!"

ಪೋಸ್ಟ್‌ಮ್ಯಾನ್ ಬಂದ. ಗಿರಾಕಿಗಳಿಂದ ಕಾಗದವುಂಟೇ ಎಂದು ಕೈನೀಡಿದೆ. "ಕಾಗದ ಇಲ್ಲ ಸ್ವಾಮಿ. ಕೆಲೆಂಡರ್ ಉಂಟೇ?" ಎಂದು ಕೇಳಿದ!

"ಉಪ್ಪುಂಟು, ಮೆಣಸುಂಟು, ಶುಂಠಿಯುಂಟು; ಆದರೆ, ಕೆಲೆಂಡರ್ ಇಲ್ಲ!" ಎಂದೆ. ನಾನು ಜಗಳಕ್ಕೆ ಸಿದ್ಧನಾಗಿದ್ದೆ.

"ಒಂದು ಕೆಲೆಂಡರ್........"

"ಸೇರಿಗೆ ಹತ್ತು ಕಾಸು ಉಪ್ಪಿಗೆ, ಮೆಣಸಿಗೆ ಬರೀ ಅರ್ಧಾಣೆ, ಶುಂಠಿಗೆ ಮಣಕ್ಕೆ ಕಾಲಾಣೆ ಮಾತ್ರ. ತಕೊಂಡು ಹೋಗು! ಕೆಲೆಂಡರ್ ಮಾತ್ರ ಇಲ್ಲ!" ಎಂದೆ.

ಪೋಸ್ಟ್‌ಮ್ಯಾನ್ ನಗುತ್ತ, "ಅದೊಂದೂ ಬೇಡ ಸ್ವಾಮಿ, ಕೆಲೆಂಡರ್ ಕೊಡಿ ಒಂದು!" ಎಂದ.

"ಶಂಕರಾ, ನಿನಗೆ ಹುಚ್ಚೆ? ನಾನು ಮಾಡಿಸದೆ ಎಲ್ಲಿಂದ ಕೊಡಲಿ? ಈಗ ನಿನ್ನೊಡನೆ ಕೇಳಿದರೆ ಕೊಡು ನೋಡೋಣ!"

ಪೋಸ್ಟ್‌ಮ್ಯಾನ್ ಶಂಕರನಿಗೇನು ಕಂಡಿತೊ! ಕೈಯಲ್ಲಿದ್ದ ಕಟ್ಟಿನಿಂದ ಒಂದು ಸುರುಳಿ ತೆಗೆದುಕೊಟ್ಟನು.

ನನಗಾಶ್ಚರ್ಯವಾಯಿತು. ಅದರಲ್ಲಿ "ಮಿಲಾಂದ್ ಎಂಡ್ ಮಿಲಾಂದ್, ತಾಮ್ರ ವ್ಯಾಪಾರಿಗಳು'' ಎಂದು ಬರೆದಿತ್ತು.

"ಇದು ನನ್ನ ವಿಳಾಸವಲ್ಲ" ಎಂದೆ.

"ಯಾರದೂ ಇರಲಿ, ಅದು ನಿಮಗೆ" ಎನ್ನುತ್ತ ಹೊರಟು ಹೋದ.

ಹೊಸ ಚೈತನ್ಯವುಂಟಾಯಿತು. ಆ ದಿನ ಸಾಯಂಕಾಲ ಬಂದ ಗಿರಾಕಿಯೊಬ್ಬನು, ಅರ್ಧಾಣೆ ವ್ಯಾಪಾರ ಮಾಡಿದನು. ಅವನು ನಮ್ಮೂರಿಗೆ ಬಂದು ಒಂದು ವರ್ಷವಾಗಿತ್ತು. ಕೋಮನ್ ನಾಯರನಂತೆ. ಬಂದು ಇಳಿದ ದಿನವೇ ನಮ್ಮ ಅಂಗಡಿಗೆ ನೆಟ್ಟಗೆ ಬಂದು, "ನಾನು ಇದೇ ರಸ್ತೆಯಲ್ಲಿ ಇದ್ದೇನೆ. ಈ ದಿನವೇ ಬಂದಿದ್ದೇನೆ. ನನಗೆ ಸಾಲಕೊಡಬಹುದೇ?" ಎಂದು ಕೇಳಿದ್ದನು. ಇಷ್ಟು ಪ್ರಾಮಾಣಿಕ ಗಿರಾಕಿಗಳು ಒಂದೊಂದು ರಾಷ್ಟ್ರದಲ್ಲಿ ಒಬ್ಬೊಬ್ಬರು ಮಾತ್ರ ಇರಲು ಸಾಧ್ಯವೆಂದು ನನಗೆ ಹೊಳೆದು, "ನಾವೆಲ್ಲ ಕಡತಂದವರು. ನಗದಿಯ ಪ್ರಾಮಾಣಿಕ ವ್ಯಾಪಾರಸ್ಥರಲ್ಲಿ ಮಾತ್ರ ಅದು ಸಾಧ್ಯ" ಎಂದೆ. ನಾಯರನು ಬೇಸರಿಸದೆ, ಒತ್ತಾಯ ಮಾಡದೆ, ಒಂದು ಮಾತೂ ಆಡದೆ, ನಿಲ್ಲಲಾರದೆ, ಇಳಿದು ಹೋಗಿದ್ದನು. ಇಂದು ಅವನ ದರುಶನವು ಅಪರೂಪವಾಗಿ ಸಿಕ್ಕಿತ್ತು. ಅಂದಿನ ದಿನಕ್ಕೆ ಅವನವೇ ಆ ಅರ್ಧಾಣೆಯ ವ್ಯಾಪಾರ ನನಗೆ.

ವ್ಯಾಪಾರವಾಯಿತು. ಅವನು ಕೊಂಡುಕೊಂಡುದು ಒಂದು 'ಬ್ಲೇಡು'. ಕೆಳಗಿಳಿಯದೆ, ಅತ್ತಿತ್ತ ನೋಡಿ, "ಒಂದು ಕೆಲೆಂಡರ್........" ಎಂದನು.

"ಇಲ್ಲ" ಎಂದೆ.

"ಏಕೆ ಇಲ್ಲ? ಯುರೋಪಿಯನರಾದರೆ ಹಿಂದೀಯರ ಹಾಗೆ ಅಲ್ಲ!" ಎಂದನು.

"ಅದಕ್ಕಾಗಿಯೇ ಅವರನ್ನು ಯುರೋಪಿಯನರೆಂದು ಕರೆಯುತ್ತಾರೆ, ನಮ್ಮನ್ನು ಹಿಂದುಗಳೆನ್ನುತ್ತಾರೆ" ಎಂದೆ.

"ಕೆಲೆಂಡರ್ ಕೊಡುವುದು ವ್ಯಾಪಾರಸ್ಥರ ಧರ್ಮ; ಅವರಿಗೇ ಒಳ್ಳೆ ಜಾಹೀರಾತು!" ಎಂದನು.

"ಆದರೆ, ಕೆಲೆಂಡರ್ ಇಲ್ಲದ ವ್ಯಾಪಾರಸ್ಥ........" ಎನ್ನುತ್ತಿರುವಾಗ ಅವನ ಕಂಕುಳಲ್ಲಿ ಒಂದು ಕಟ್ಟು ಕಂಡಿತು. ಕೈಹಾಕಿ ನೋಡಿದರೆ, ಏಳು ಕೆಲೆಂಡರುಗಳಿದ್ದುವು. ಒಂದನ್ನು ತೆಗೆದು, "ತಾರೀಕು ನೋಡಲು ನನ್ನಲ್ಲಿ ಒಂದು ಕೆಲೆಂಡರಿಲ್ಲ!" ಎಂದು ಒಳಗಿಟ್ಟೆ.

ರಾತ್ರೆ ಮನೆಗೆ ಬರುವಾಗ, ನನಗೆದುರಾದವರೆಲ್ಲರಿಗೆ "ಇಲ್ಲ" ಎಂದು ಹೇಳುತ್ತ ಬಂದ ನೆನಪು—ಅವರು ಕೇಳಿದುದೇನೊ ಗೊತ್ತಿಲ್ಲ. ಊಟಕ್ಕೆ ಕುಳಿತಾಗ, ಅನ್ನಬಡಿಸಿ ಪದಾರ್ಥವಿಕ್ಕಿ, ನಮ್ಮತ್ತೆಯ ಏಕಮಾತ್ರ ಕುವರಿ "ಏನು ಬೇಕು? ಎಂದು ಕೇಳಿದಳು.

"ಇಲ್ಲ. ನಿನ್ನೊಡನೆ ಉಂಟೇ?" ಎಂದೆ.

"ಏನು?" ಎಂದು ಕೇಳಿದಳು.

"ಕೆಲೆಂಡರ್!" ಎಂದೆ. ಅದೇ ಭ್ರಾಂತಿ ನನಗೆ.

ಮುಂಕು ಬಡಿದಂತಾಗಿ ಗೃಹಿಣಿ, "ಇಲ್ಲ" ಎಂದಳು.

ಎಚ್ಚೆತ್ತು, "ನೀನು ವೀರಪತ್ನಿ! ಗೃಹರತ್ನ! ಆದರ್ಶನಾರಿ!" ಎಂದೆ.

ಇದು ಒಂದು ದಿನದ ಅನುಭವ. ಇನ್ನು ಬರುವ ನವಂಬರ ೩ನೇ ತಾರೀಕಿನ ವರೆಗೆ ನಿತ್ಯವೂ ಅನುಭವಿಸಬೇಕಾಗಿದೆ.

† † † † †

ರಸ್ತೆಯಿಂದ ಹೋಗುವಾಗ, ಮೂವತ್ತು ವರ್ಷ ಪ್ರಾಯದ ಮಕ್ಕಳು ಕೂಡ, ಸಾಮಾನ್ಯವಾಗಿ ಹೀಗೆ ಆಡಿಕೊಳ್ಳುತ್ತಿರುವರು:

"ನಿನಗೆಷ್ಟು ಸಿಕ್ಕಿದೆ?"

"ನೂರೈವತ್ತು."

"ನನಗೆ ಇನ್ನೂರಮೂವತ್ತು."

ಐನೂರು, ಏಳುನೂರು, ಸಾವಿರದ ವರೆಗೆ ಕೆಲೆಂಡರುಗಳನ್ನು ಕೂಡ ಹಾಕಿದವರಿರಬಹುದು. ಒಂದು ಕೆಲೆಂಡರಿಗಾಗಿ ಐನೂರು ರೂಪಾಯಿಯ ವ್ಯಾಪಾರ ಮಾಡುವವರೂ ಇರಬಹುದು; ಆದರೆ, ಅರ್ಧಾಣೆ ವ್ಯಾಪಾರ ಮಾಡಿ ಕೆಲೆಂಡರು ಕೇಳುವವರೂ ಇದ್ದಾರೆ. ನಿಮ್ಮ ಮುಂದಿರುವ ಪ್ರತಿಯೊಬ್ಬನೂ ಕೆಲೆಂಡರ್ ಜೇಡ.

ಭರತಮಾತೆಯೇ,-

"ನಿನ್ನುದರದಲಿ ಜನ್ಮ ಕೊಡು!

ಧರಿಸಲೆನಗೆ ಚಿಂದಿ ಬಟ್ಟೆಯಿರಲಿ!

ಕನಕಾನ್ನ ಬೇಡವಾ!

ಆದರೆ,—

ಆನೆಕಾಲು ಭಯ ಮತ್ತು ಕೆಲೆಂಡರ್ ಜೇಡರಿಲ್ಲದ ಸ್ಥಳ ಬೇಕವ್ವ! ನಾನು ಕೋಟ್ಯಾಧೀಶನಾಗಿದ್ದರೆ, ಅಂಥ ಸ್ಥಳಕ್ಕೆ ಎಕ್ರೆಗೆ ಮೂವತ್ತುಲಕ್ಷ ರೂಪಾಯಿಗಳನ್ನಾದರೂ ಕೊಟ್ಟು ಕೊಂಡುಕೊಂಡು, ಅಲ್ಲಿ ಬಿದ್ದು ಕೊಂಡಿರುವೆನು!"

—ಇದು ನನ್ನ ಪ್ರಾರ್ಥನೆ.

---

## ೧೫. ಪಾಕೀಟುಗಳ ಪರ್ಯಾಯ

ಅವನು ರೈಲು ಹತ್ತಿದುದು ರಾಣೆಬೆನ್ನೂರಿನಲ್ಲಿ, ಬೆಳಿಗ್ಗೆ. ಒಂದೂವರೆ ಅಂಗುಲ ಅಗಲದ, ಎರಡಂಗುಲ ಉದ್ದದ ಗಡ್ಡವನ್ನು ಇಟ್ಟಿದ್ದನು. ಸಪೂರವೂ ಉದ್ದವೂ ಇದ್ದ. ಬಾದಷಾಹೀ ತರಗತಿಯ ಮೀಸೆಗಳಿದ್ದುವು. ಕಣ್ಣುಗಳು ಎದುರಿದ್ದವನ ಎದೆಯೊಳಗೂ ಹೊಕ್ಕಿ ನೋಡುವಂತೆ "ಕುಕ್ಕಿನ ನೋಟ"ವುಳ್ಳದ್ದಾಗಿದ್ದುವು. ಆಗಾಗ್ಗೆ ಅತ್ತಿತ್ತ ಚಲಿಸುತ್ತ, ಯಾವ ಬಗೆಯ ದೃಶ್ಯವನ್ನೂ ವಿನೋದದಿಂದ ನೋಡಬಲ್ಲ, ಚಂಚಲ ದೃಷ್ಟಿಯದು. ತಲೆಗೊಂದು ಎತ್ತರದ ಟೋಪಿ, ಕೈಯಲ್ಲೊಂದು ಚಿಕ್ಕ ಕರ್ರಗಿನ ಬೆತ್ತ, ಕಾಲು

ತನಕ ಕರ್‍ರಗಿನ ಇಜಾರು. ವೆಸ್ಟ್‌ಕೋಟೂ, ಕೋಟೂ ಎಲ್ಲವೂ ಕರ್‍ರಗೆ. ಮನುಷ್ಯನೂ ಕರಿಯುವನಾಗಿದ್ದನು.

"ನಮ್ಮೆದುರಿನ ಈ ಮಾಮಾ, ಮೆಜಿಶಿಯನ್, ಖಂಡಿತ!" ಎಂದೆ.

ನನ್ನ ಸಂಗಾತಿ ನಗುತ್ತ, "ಯಾವನೊ ಜ್ಯೂ ಪ್ರೊಫೆಸರ್........ ಸಮಶೇರ್" ಎಂದ.

"ಬೆರಳೆಡೆಯಿಂದ ಕೋಳಿತತ್ತಿ ಹೊರಡಿಸಿ ಜೀವಿಸುವ ಒಂದು ಹುಳ!" ಎಂದೆ.

ನಮ್ಮ ಮೆಜಿಶಿಯನನ ದೃಷ್ಟಿ ಫಕ್ಕನೆ ನಮ್ಮ ಮೇಲೆ ತಿರುಗಿತು. "ಕೋಳಿತತ್ತಿ ಹೊರಡಿಸುವುದು ನಿಜ; ಆದರೆ ನಾನು ಹುಳ........ಅದು ನಿಜವಲ್ಲ" ಎಂದ. ನಾವು ಬೆಪ್ಪಾದೆವು.

"ನಾನು ಮೆಜಿಶಿಯನ್!" ಎಂದ.

ಬೆಪ್ಪಗೆ ಕುಳಿತ ನಾವು, ಅಹುದೆಂದು ದೃಷ್ಟಿಯಿಂದಲೇ ಒಪ್ಪಿದೆವು. ನಾವು ತಮಾಷೆಗಾಗಿ ನುಡಿದುದು ನಿಜವಾಯಿತೆಂದು ಆಶ್ಚರ್ಯ ನಮಗೆ. ಅವನಿಗೆ ಕನ್ನಡ ಬಾರದೆಂದೂಹಿಸಿ, ಅವನು ಕೇಳಬಾರದ ಅಥವಾ ತಾಳಲಾರದ ಮಾತುಗಳನ್ನಾಡಿದುದು ಬೇರೆ.

"ಹಿಂದೂದೇಶವನ್ನೆಲ್ಲಾ ಸುತ್ತಾಡಿದ್ದೇನೆ. ನಿಮ್ಮ ಹಾಗೆ ಮಾತಾಡುವ ಮನುಷ್ಯರನ್ನು ನಾನು ಕಂಡಿಲ್ಲ!" ಎಂದ.

"ಖ್ಗ" ಎಂದು ಗಂಟಲೊಳಗೇ ಒಂದು ವಿಕಾರ ಶಬ್ದಮಾಡಿದ, ನನ್ನ ಸಂಗಾತಿ, ನಾಚಿಕೆಯಿಂದ. ನಾನೂ ನಾಚಿಕೆಯಿಂದ, "ಉದ್ದೇಶಪೂರ್ವಕವಾಗಿ ನುಡಿದುದಲ್ಲ, ಚಿಲ್ಲರೆ ತಮಾಷೆ!" ಎಂದೆ.

ಮೆಜಿಶಿಯನ್ ನಮ್ಮ ಮಾತುಗಳ ಕಡೆಗೆ ಲಕ್ಷ್ಯಕೊಡಲಿಲ್ಲ. "ನಾನು ಕೋಳಿತತ್ತಿ ಹೊರಡಿಸುತ್ತೇನೆ. ಕೋಳಿ ಮರಿಗಳನ್ನೂ ಹೊರಡಿಸುತ್ತೇನೆ. ವಾಯುವಿನಿಂದ........ಬರೇ ಗಾಳಿಯಿಂದ, ತಿಳಿದಿರಲಿ!........ಆಮೆ, ಮರಕುಟಿಗನ ಹಕ್ಕಿ, ಕಪ್ಪೆ, ಹೆಗ್ಗಣ, ಬಾತುಕೋಳಿ........ಇನ್ನೇನು ಬೇಕು ನಿಮಗೆ?"

"ಏನೂ ಬೇಡ!"

"........ಎಲ್ಲವನ್ನೂ ಹೊರಡಿಸಬಲ್ಲೆ."

"........ಆಂ!"

"ಹೊರಡಿಸಿ, ತಿಂದು, ಅಥವಾ ಕೊಂದು ಪುನಃ ಹೊರಡಿಸಬಲ್ಲೆ. ನಿಮಗೇನು ಗೊತ್ತು?" (ವಿಕಾರದೃಷ್ಟಿಯಿಂದ)

"ಏನೂ ಇಲ್ಲ!"

"ಏನೂ ಇಲ್ಲ! (ತಿರಸ್ಕಾರದಿಂದ)........ಮನುಷ್ಯರನ್ನು ಇಲ್ಲಿಂದಿಲ್ಲಿಗೇ ಮಾಯಮಾಡಿಬಿಡುವ ಶಕ್ತಿ, ಇದೇ ಚಿಕ್ಕ ಕೋಲಿನಲ್ಲಿದೆ!"

ನಾನು ಒಂದಡಿ, ನನ್ನ ದೋಸ್ತಿ ಎರಡಡಿ—ಆಚೆಯೀಚೆ ಸಿಡಿದೆವು. ಮೆಜಿಶಿಯನ್ ಮಹಾಶಯನ ಕರಿಯ ಬೆತ್ತವು ನಮಗೆ ತಗಲಲು ಒಂದೇ ಅಂಗುಲ ಉಳಿದಿತ್ತು. ಆ ಬೆತ್ತ ತಗಲಿದರೆ ನಾವು ಮಾಯ ಎಂದೇ ಭೀತಿ ನಮಗೆ.

"ಇಲ್ಲ ಇಲ್ಲ, ಈಗ ನಿಮ್ಮನ್ನು ಕಾಣೆಮಾಡುವುದಿಲ್ಲ!" ಎಂದ.

"ಈ ರೈಲನ್ನೇ ಕಾಣೆಮಾಡಬಹುದೇ ಆ ಚಿಕ್ಕ ಬೆತ್ತದಿಂದ?" ನನ್ನ ಸಂಗಾತಿ ಕೇಳಿದ, ಹೆದರುತ್ತ. ತಾಜಮಹಲನ್ನು ನೋಡಿದರೆ ಆಗುವಷ್ಟು ಕೌತುಕದಿಂದ ಆ ಬೆತ್ತವನ್ನು ನೋಡುತಿದ್ದ.

"ಬಲ್ಲೆ. ಆದರೆ, ಹಾಗೆಲ್ಲಾ ಮಾಡುವುದಿಲ್ಲ. ಒಳ್ಳೇ ಕೆಲಸವಲ್ಲ!" ಎಂದ.

ನನ್ನ ಸಂಗಾತಿ "ಹುಂ" ಎನ್ನುತ್ತ, ಒಂದು ಸಂತೃಪ್ತಿಯ ನಿಟ್ಟುಸಿರಿಟ್ಟು, ಹೆಣದಂತೆ ಮುಖಮಾಡಿ, ಒಂದು ನಗು ನಕ್ಕುಬಿಟ್ಟ. ನಾನು, "ಹಾಗೆ ಮಾಡಿದರೆ ಅವರಿಗೇನೂ ದೊರೆವುದಿಲ್ಲ!" ಎಂದೆ.

"ಆ ಪ್ರಶ್ನೆಯೇ ಅಲ್ಲ. ನನಗೆ ಮನಸ್ಸಾದರೆ ರೈಲನ್ನು ಇನ್ನೊಂದು ನಿಮಿಷದಲ್ಲಿ ಎಲ್ಲಿಯೂ ಏನೂ ಇಲ್ಲದಂತೆ ಮಾಡಿಬಿಡುವುದುಂಟು" ಎಂದ ಮೆಜಿಶಿಯನ್.

"ಆದರೆ, ಈ ರೈಲನ್ನಲ್ಲ!" ಎಂದು ನನ್ನ ಸಂಗಾತಿ ಒಂದು ಚಿಕ್ಕ ಅರ್ಜಿಮಾಡಿ, ಆತುರದಿಂದ ಆ ರೈಲುಭಕ್ಷಕನ ಕಡೆಗೆ ಬೇಡಿಕೆಯ ದೃಷ್ಟಿಯಿಟ್ಟ.

"ನಿಮಗಾಗಿ ಈ ರೈಲನ್ನೀಗ ಇಲ್ಲಿ ಬಿಟ್ಟಿದ್ದೇನೆ" ಎಂದ ಮೆಜಿಶಿಯನ್.

"ಮತ್ತು ನಿಮಗಾಗಿಯೂ!" ನಾನಂದೆ. ರೈಲು ಮಾಯವಾಗುವಾಗ ಈ ಮೆಜಿಶಿಯನನೂ ಅದರೊಂದಿಗೆ ಕಾಣೆ ಎಂದು ನನಗೆ ಖಚಿತ.

"ನಾನು ಯಾವಾಗಲೂ ಇದ್ದೇನೆ. ಯಾವ ಇಂದ್ರಜಾಲವೂ ನನ್ನನ್ನು ಹೊರತು ಮಿಕ್ಕವರಿಗಳಿಗೆ ಮಾತ್ರ ತಗಲುವುದು."

"ಥೇಂಕ್ಸ್" ಎಂದ ನನ್ನ ಸಂಗಾತಿ.

"ದೆಟ್ಸ್ ರ್‍ಯಾಯ್ಟ್!" ಎಂದ ಮೆಜಿಶಿಯನ್.

"ಕ್ವಾಯ್ಟ್" ಎಂದ ನನ್ನ ಸಂಗಾತಿ.

ನನ್ನ ಸಂಗಾತಿಯು ಚಿಕ್ಕ ಮಗುವಿನಂತೆ ಆ ಮೆಜಿಶಿಯನನಿಗೆ ಹೆದರುವುದನ್ನು ನೋಡಿ ನನಗೆ ನಗು ಬಂತು. ನನ್ನ ಸಂಗಾತಿ ಬೆಪ್ಪಾಗಿ, "ನೀವೇಕೆ ನಗುತ್ತೀರಿ?" ಎಂದು ಕೇಳಿದ.

"ನಾನೀಗ, ಅದೋ—ಅಲ್ಲಿ ಕಾಣುತ್ತಿದ್ದ ಆ ಕಟ್ಟಡವನ್ನು ಈಗ ಕಾಣೆ ಮಾಡಿದೆ. ನೀನು ನೋಡಲಿಲ್ಲ!" ಎಂದ ಮೆಜಿಶಿಯನ್.

ನನ್ನ ಸಂಗಾತಿ ಹೊರಗೆ ತಲೆಹಾಕಿ ಕಾತರ ಮನಸ್ಸಿನಿಂದ ಅತ್ತಿತ್ತ ನೋಡುತ್ತ "ಎಲ್ಲಿ, ಯಾವ ಮನೆ?" ಎಂದು ತೊದಲ್ನುಡಿದು ಕೇಳಿದ.

ಮೆಜಿಶಿಯನ್ ನಗುತ್ತ, "ಹೋದ ಮನೆಯನ್ನು ಈಗ ಯಾವುದೆಂದು ತೋರಿಸಲಿ? ಇದೇ ಆ ಮನೆಯಲ್ಲಿದ್ದ ಒಂದು ಕೋಳಿತತ್ತಿ!" ಎನ್ನುತ್ತ ರೈಲುಗಾಡಿಯ ಹೊರಗೆ ಕೈಹಾಕಿ, ಗಾಳಿಯಿಂದಲೇ ಒಂದು ಕೋಳಿತತ್ತಿ ಹಿಡಿದು ಒಳಗೆ ತಂದ! ನಾವಿಬ್ಬರೂ ಈ ಅದ್ಭುತವನ್ನು ನೋಡಿ ಬೆರಗಾದೆವು.

ಮೆಜಿಶಿಯನನು ಈ ಕೋಳಿತತ್ತಿಯ ತುದಿಯನ್ನು ತನ್ನ ಬೂಟಿಸಿನ ಬುಡಕ್ಕೆ ಬಡಿದು, ಅದರ ತುದಿಯಲ್ಲಿ ಒಂದಂಗುಲದಷ್ಟು ಕೆರೆದು ಬಾಯಿಗೆ ಹೊಯ್ದು ಕುಡಿಯುತ್ತ, "ಏನಾದರೂ ತಿಂದ ಕೂಡಲೇ ಒಂದು ಸಿಗರೇಟು ಸೇದುವುದು ನನ್ನ ಅಭ್ಯಾಸ!" ಎನ್ನುತ್ತ, ತನ್ನ ಹೇಳಿಕೆ ಮುಗಿವುದರೊಳಗೇ ನನ್ನ ಸಂಗಾತಿಯ ತಲೆಮೇಲೆ ತಟಕ್ಕನೆ ಕೈಚಾಚಿ, ಒಂದು ನುಸಿ ಹಿಡಿದಂತೆ ಮಾಡಿದ. ನನ್ನ ಸಂಗಾತಿ, "ಅಯ್ಯೋ!" ಎಂದು ಚೀರಿ ಹಾರಲು, ಮೆಜಿಶಿಯನನು—"ಛೆ ಛೆ ಹೆದರಬೇಡಿ! ಒಂದು ಸಿಗರೇಟು ತೆಗೆದೆ, ಅಷ್ಟೆ" ಎಂದು, ಕೈಯಲ್ಲೊಂದುಸಿಗರೇಟು ಹಿಡಿದು ಬಾಯಿಗಿಟ್ಟುಬಿಟ್ಟನು. ನಮಗೆ ಆಶ್ಚರ್ಯ!

"ಬೆಂಕಿಪೆಟ್ಟಿಗೆ ಬೇಕಾದಾಗ ಬೇಕಾದಷ್ಟು ಸಿಕ್ಕುವಂತಹ ಸ್ಥಳದಲ್ಲೇ ದೇವರು ನಮ್ಮನ್ನು ಸೃಷ್ಟಿಸಿದ. ದೇವರಿಗೊಂದು ಥೇಂಕ್ಸ್!" ಎನ್ನುತ್ತ, ನನ್ನ ತಲೆಮೇಲೆ ಕೈಬೀಸಿ ಒಂದು ಬೆಂಕಿಕಡ್ಡಿ ಹಿಡಿದನು ಆ ಮೆಜಿಶಿಯನ್.

ಇದೆಲ್ಲಿಂದ ಬಂತೆಂದು ನಾನು ಆತನ ಬಲಗೈಯನ್ನೇ ನೋಡುತ್ತಿರುವಷ್ಟರಲ್ಲಿ ನನ್ನ ಸಂಗಾತಿಯು ತಲೆಮೇಲೆ ಕೈಯಿಟ್ಟು ಆತ ಬೆಂಕಿಪೆಟ್ಟಿಗೆಯನ್ನು ತೆಗೆದು ಈ ಕಡ್ಡಿಯನ್ನು ಒರಸಿ, ಸಿಗರೇಟಿಗಿಟ್ಟು, ಬಾಯಿತುಂಬ ಹೊಗೆ ಊದಿದ. ಚಟ್—ಚಟ್,—ರೈಲು ಓಡುತ್ತಿತ್ತು.

ನಮ್ಮ ಮೆಜಿಶಿಯನ್ ಒರಗಿ ಕುಳಿತು, ಎರಡು ನಿಮಿಷ ಮೌನವಾಗಿ ಸಿಗರೇಟು ಸೇದುತ್ತಿದ್ದ. ನಾವು ಅವನನ್ನೇ ನೋಡುತಿದ್ದೆವು. ಸಿಗರೇಟಿನ ಚಿಕ್ಕ ತುಂಡೊಂದು ಉಳಿಯಿತು. ಫಕ್ಕನೆ ಎದ್ದು ಕುಳಿತು, "ಎಲ್ಲ ಕಲೆಗಳಲ್ಲಿ ಈ ಐಂದ್ರಜಾಲದಷ್ಟು ಅದ್ಭುತ ಕಲೆಯಿಲ್ಲ!" ಎನ್ನುತ್ತ, ಬಾಯಿಯನ್ನೂ ಅಗಲವಾಗಿ ತೆರೆದು, ಉರಿಯುತ್ತಿದ್ದ ಆ ಸಿಗರೇಟು ತುಂಡನ್ನು ಬಾಯಿಯೊಳಗೆ ಬಿಸುಡಿ, ಕೈ ಮುಷ್ಟಿಯನ್ನು ನಮ್ಮೆದುರಿಗೇ ತೆರೆದು ತೋರಿಸಿದ. ಕೈಯಲ್ಲಿ ಸಿಗರೇಟಿನ ತುಂಡಿರಲಿಲ್ಲ. ಬಾಯಿಯೊಳಗೂ ಇರಲಿಲ್ಲ!

"ಅಯ್ಯೋ, ಆ ಸಿಗರೇಟು ತುಂಡು...........???" ಎಂದು ನನ್ನ ಸಂಗಾತಿ ಗಾಬರಿಯಿಂದ ಕೇಳಿದ.

"ಹೋಯಿತು ಹೊಟ್ಟೆಯೊಳಗೆ!" ಎಂದ ಮೆಜಿಶಿಯನ್. ಅವನಿಗೆ, ನನ್ನ ಭೋಳೇ ಸ್ವಭಾವದ ಸಂಗಾತಿಯನ್ನು ಇನ್ನೂ ಗಾಬರಿಗೊಳಿಸಿ, ವಿನೋದಪಡುವ ಕುತೂಹಲವು ನಿಮಿಷ ನಿಮಿಷಕ್ಕೂ ಹೆಚ್ಚುತಿತ್ತು.

"ಬಹುಶಃ ನೀವು ಅದನ್ನು ನಿಮ್ಮ ಬಳಿಯಲ್ಲೇ ಎಲ್ಲೋ ಇಟ್ಟಿದ್ದಿರಿ!" ಎಂದ ನನ್ನ ಸಂಗಾತಿ.

"ಇಲ್ಲ, ಹುಡುಕಿರಿ ನೀವು" ಎನ್ನುತ್ತ, ಆ ಮೆಜಿಶಿಯನ್ ಎರಡೂ ಕೈಗಳನ್ನು ಚಾಚಿ ಮುಗುಳ್ನಗೆ ನಗುತ್ತ ಕುಳಿತ. ರೈಲುಗಾಡಿಯಲ್ಲೆಲ್ಲ ಅವನೂದಿದ ಸಿಗರೇಟಿನ ಹೊಗೆಯು ಝುಂಯ್ಯೆಂದು ಅತ್ತಿತ್ತ ಬೀಸಿ ನನ್ನ ಮೂಗಿನ ಸೊಳ್ಳೆಗಳನ್ನು ಹೊಕ್ಕಿ, ನನಗೆ ಉಸಿರುಕಟ್ಟಿತು. ನನಗೆ ಮೊದಲೇ ಒಂದು ದಿನದಿಂದ ರೈಲುಪ್ರವಾಸ, ಉಪವಾಸ; ತಲೆತಿರುಗಿದಂತಾಗಿ ಕಣ್ಣುಮುಚ್ಚಿ ಕುಳಿತೆ.

"ಸಿಕ್ಕಲಿಲ್ಲವಷ್ಟೆ?" ಎಂದ ಮೆಜಿಶಿಯನ್.

ನನ್ನ ಸಂಗಾತಿ ಕುರಿಯಂತೆ ಮುಖಮಾಡಿ 'ಇಲ್ಲ!' ಎಂದ.

"ಆದರೆ, ಸಿಗರೇಟು ತುಂಡು ಯಾರ ಆರೋಗ್ಯಕ್ಕೂ ಒಳ್ಳೆಯದಲ್ಲ!"

ಎನ್ನುತ್ತ, ನನ್ನ ಸಂಗಾತಿಯ ಕೋಟಿನ ಮೇಲೆ ಕೈಯಾಡಿಸಿ ಆ ಮೆಜಿಶಿಯನನು ತಾನು ಮೊದಲು ನುಂಗಿದ ಸಿಗರೇಟು ತುಂಡನ್ನು ಹೊರಗೆ ತೆಗೆದ.

"ಹೋಪ್ಪ!" ಎಂದು ನನ್ನ ಸಂಗಾತಿ ಉಸಿರೆಳೆದು ಬಿಟ್ಟ.

"ನೀವದನ್ನು ತಿಂದುದು ನನಗೆ ಹಿತ ಕಾಣಲಿಲ್ಲ. ಅದಕ್ಕಾಗಿಯೇ ಹೊರಗೆಳೆದೆ." ಎಂದ ಮೆಜಿಶಿಯನ್.

"ಆದರೆ, ನಾನು ತಿಂದುದಲ್ಲ. ನೀವೇ.... ..."

"ಛೀ ಛೀ ಛೆ! ತಿಂದವನು ನಾನಲ್ಲ. ನಿಮ್ಮ ಹೊಟ್ಟೆಯಿಂದ ಈಗ ಈ ತುಂಡನ್ನು ಈ ನಮ್ಮ ಸ್ನೇಹಿತರ ಎದುರಿಗೇ ತೆಗೆದಿರುತ್ತೇನೆ. ತಿಂದವರಾರೆಂದು ಅದರಿಂದಲೇ ಸ್ಪಷ್ಟ!" ಎಂದ ಮೆಜಿಶಿಯನ್.

"ಹೇ ದೇವರೇ, ನಾನು......" ನನ್ನ ಭೋಳೇ ಸಂಗಾತಿ ಬಾಯ್ತೆಗೆದ.

"ಚೂಪ್! ಚಿಂತೆಯಿಲ್ಲ. ನೀವದನ್ನು ತಿಂದರೂ, ನಾನು ಹೊರಗೆ ತೆಗೆದೆನಲ್ಲವೇ? ಹೆದರಬೇಡಿ!" ಎಂದ.

"ಇಲ್ಲ, ನಾನು ತಿಂದಿಲ್ಲ!" ಎಂದ ನನ್ನ ಸಂಗಾತಿ.

"ಹೆದರಬೇಡಿ. ನೀವು ತಿಂದರೂ ದೊಡ್ಡ ಆಸ್ತಿ ತಿಂದಿಲ್ಲ. ನಾನೇನೂ ನಿಮ್ಮ ಮೇಲೆ ವ್ಯಾಜ್ಯಮಾಡುತ್ತೇನೆಯೇ? ನಿಮಗಿನ್ನು ಅಪಾಯವಿಲ್ಲ. ಇಕೋ, ಬಿಸುಡಿದೆ!" ಎನ್ನುತ್ತ ಆ ಸಿಗರೇಟು ತುಂಡನ್ನು ಬಿಸುಡಿದ.

ನನ್ನ ಸಂಗಾತಿಯು ಈ ಮಾತುಗಳಿಂದ ಪೂರ್ಣ ಕುರಿಯಾಗಿ, ಮೌನವಾದನು. ನನಗೆ ನಗು ಬಂತು.

ಮೆಜಿಶಿಯನ್ ನನ್ನನ್ನೇ ನೋಡುತ್ತ "ನೀವು ಕೆಟ್ಟ ಮನುಷ್ಯ!" ಎಂದ. ನಾನು ನನ್ನ ಸಂಗಾತಿಯಷ್ಟು ಭೋಳೆ ಅಲ್ಲವೆಂಬುದರಿಂದ ಅವನಿಗೆ ನನ್ನ ಮೇಲೆ ಸ್ವಲ್ಪ ಪ್ರತೀಕಾರದ ತೃಷ್ಣೆಯುಂಟಾಗಿತ್ತೆಂದು ತೋರುವುದು.

"ನನ್ನ ಎಲ್ಲ ಶತ್ರುಗಳು ಹಾಗೆಯೇ ಹೇಳುತ್ತಾರೆ!" ಎಂದೆ.

"ಆದರೆ, ಎಲ್ಲಾ ಕೆಟ್ಟ ಮನುಷ್ಯರು ಕಳ್ಳರಲ್ಲ" ಎಂದ.

"ಅಥವಾ ಎಲ್ಲಾ ಕಳ್ಳರು ಕೆಟ್ಟ ಮನುಷ್ಯರಲ್ಲ" ಎಂದೆ ನಾನು.

ಚತುರುಕ್ತಿಯಲ್ಲಿ ನಾನೂ ಆಗ್ರಹದಿಂದಿರುವೆನೆಂದು ತಿಳಿದು ಮೆಜಿಶಿಯನ್, ತನ್ನ ಬಲಬದಿಯ ನಾಲ್ಕು ಮೀಸೆಗಳನ್ನು ಕಚ್ಚಿ ಜಗಿಯುತ್ತ,

ಒಂದು ನಿಮಿಷ ಆಲೋಚಿಸಿ, "ತನ್ನ ಸಂಗಾತಿಗಳು ಭೋಳೇ ಸ್ವಭಾವದವ ರೆಂದು ತಿಳಿದು, ಪಾಪದವರ ಬದುಕನ್ನು ಕದಿಯಬಾರದು!" ಎನ್ನುತ್ತ, ನನ್ನನ್ನೆ ತನ್ನ "ಕುಕ್ಕಿನನೋಟ"ದಿಂದ ನೋಡಿದ.

ನನಗಾ ಮಾತು ರುಚಿಸಲಿಲ್ಲ. "ಯಾವುದನ್ನೆನ್ನುತ್ತೀರಿ ನೀವು? ಮಿದುಳನ್ನು ಕದಿಯುವ ಮಾತೇ? ನೀವು ಆ ಕೆಲಸವನ್ನು ಚೆನ್ನಾಗಿ ಮಾಡಿದ್ದಿರಿ" ಎಂದು ನಾನು ಸ್ಥಿರದೃಷ್ಟಿಯಿಂದ ಹೇಳಿ, ಆ ಮೆಜಿಶಿಯನನ ದೃಷ್ಟಿಯನ್ನು ಎದುರಿಸಿದೆ.

"ಅಲ್ಲಾ, ಪಾಕೇಟು!" ಎಂದು ಗುಡುಗಿನ ದನಿಯಲ್ಲಿ ನುಡಿದು ದಿಟ್ಟತನದಿಂದ ನನ್ನ ಕಿಸೆಗೆ ಕೈಹಾಕಿ, ಒಂದು ಪಾಕೇಟನ್ನು ಹೊರಗೆ ತೆಗೆದ, ಮೆಜಿಶಿಯನ್!

ನನ್ನ ಕಿಸೆಯಿಂದ ಆ ಮೆಜಿಶಿಯನ್ ತೆಗೆದ ಪಾಕೇಟು, ನನ್ನ ಸಂಗಾತಿ ಯದು! ಹೇಗೆ ಬಂತೊ!

"ಹೋ" ಎಂದ ನನ್ನ ಸಂಗಾತಿ. ನಾನು ನಿಂತಲ್ಲೇ ಕಲ್ಲಾದೆ!

"ಇಕೊಳ್ಳಯ್ಯಾ ನಿನ್ನ ಚೀಲ. ರೈಲಿನಲ್ಲಿ ಪ್ರಯಾಣಮಾಡುವಾಗ ಹಣದ ಚೀಲದ ವಿಷಯ ಜಾಗರೂಕನಾಗಿರಬೇಕಯ್ಯಾ!" ಎಂದು ನನ್ನ ಸಂಗಾತಿಗೆ ಬುದ್ಧಿವಾದ ಹೇಳಿ, ಆ ಪಾಕೇಟನ್ನು ಮೆಜಿಶಿಯನ್, ಅವನಿಗೇ ಕೊಟ್ಟು, ವಿಜಯದ ದೃಷ್ಟಿಯಿಂದ ನನ್ನನ್ನು ನೋಡಿದ.

ನನ್ನ ಸಂಗಾತಿಯ ಚೀಲ ನನ್ನ ಕಿಸೆಯಲ್ಲಿ! ನಾನು ಕಳ್ಳ!! ಈ ನೀಚ ಮೆಜಿಶಿಯನನ ಕಾರಬಾರು!!!

"ಲುಚ್ಚ!" ಎಂದೆ ನಾನು.

"ಶಾಂತಿ ಶಾಂತಿ" ಎಂದ ಮೆಜಿಶಿಯನ್, ಸ್ವಲ್ಪವೂ ಕದಲದೆ.

ನಾನು ಮೆಜಿಶಿಯನನ ಮೈಮೇಲೆ ಹಾರಲು ಸಿದ್ಧ. ಅಷ್ಟರಲ್ಲೇ ರೈಲು ನಿಂತಿತು. ಹರಿಹರ ಸ್ಟೇಶನು ಬಂದಿದೆ. ನನ್ನ ನಿಲ್ದಾಣವದು. ಕಾಳಗವನ್ನು ಅಲ್ಲೆ ತೊರೆದು ನನ್ನ ಸಾಮಾನುಗಳನ್ನು ಹಿಡಿದು ಕೆಳಗಿಳಿದೆ. ನಾನು ಸೋತುದಕ್ಕೆ, ಆ ಮೆಜಿಶಿಯನನ ಮುಂದೆ ಬರಿಯ ಗೊಂಜೆಯಾದು ದಕ್ಕೆ ಎದೆಯೆಲ್ಲ ಭಾರವಾಗಿತ್ತು.

ನನ್ನ ಸಂಗಾತಿಯೂ ಇಳಿದ. "ನೀನೇಕೆ ಇಳಿದೆ?" ಎಂದು ಕೇಳಿದೆ.

"ನಾನು ದಾವಣಗೆರೆಗೆ ಹೋಗಬೇಕಾಗಿತ್ತು. ಆದರೆ, ಆ ಮೆಜಿಶಿಯನನೊಡನೆ ಇನ್ನು ಕುಳಿತುಕೊಳ್ಳುವ ಮನಸ್ಸಿಲ್ಲ!" ಎಂದ.

"ಗುಡ್‌ಬಾಯ್ ನಿಮಗೆ!" ಎನ್ನುತ್ತ ಆ ಮೆಜಿಶಿಯನ್ ತನ್ನ ಟೋಪಿ ತೆಗೆದ. ಅದರಿಂದ ಒಂದು ಕುಂದಿಲಿ ಕೆಳಗೆ ಅವನ ಹೆಗಲಿಗೆ ಹಾರಿ ಕುಳಿತಿತು.

ನನ್ನ ಸಂಗಾತಿ ಅವನಿಗೆ "ನಮಸ್ಕಾರ'' ಎಂದ.

ನನ್ನ ಸಂಗಾತಿಯೊಡನೆ ಕೇಳಿದೆ. "ನಿಜವಾಗಿ ನಾನು ನಿನ್ನ ಪಾಕೇಟ್ ಕದ್ದೆನೆಂದು ನಿನ್ನ ಅಭಿಪ್ರಾಯವೇ?"

"ಆ ಮೆಜಿಶಿಯನ್... ....ನಿನ್ನ ಚೀಲದಿಂದ ನನ್ನ ಪಾಕೇಟನ್ನು ಹೊರ ತೆಗೆದವನಲ್ಲವೆ?" ಎಂದ ನನ್ನ ಸಂಗಾತಿ.

"ಮುಚ್ಚು ಬಾಯಿ!" ಎಂದೆ. ನನ್ನ ಸಂಗಾತಿ, ಮುಚ್ಚಿದ.

ಅಷ್ಟರಲ್ಲಿ "ಒಯ್, ಇತ್ತ, ಇತ್ತ........" ಎಂದು ರೈಲುಗಾಡಿಯಿಂದ ದೊಡ್ಡ ಕೂಗು ಕೇಳಿಸಿತು. ಅತ್ತ ತಿರುಗಿದೆವು. ಮೆಜಿಶಿಯನನು, ರೈಲು ಗಾಡಿಯ ಕಿಟಕಿಯಿಂದ ಹೊರಗೆ ಮುಖಚಾಚಿ, ಗಾಬರಿಯಿಂದ, "ಪಾಕೇಟು, ಪಾಕೇಟು!" ಎಂದ.

"ಸರಿ, ಸಿಕ್ಕಿದೆ! ನನ್ನೊಡನೆಯೇ ಇದೆ!" ಎನ್ನುತ್ತ, ನನ್ನ ಭೋಳೇ ಸಂಗಾತಿ, ತನ್ನ ಪಾಕೇಟನ್ನು ತೆಗೆದು ತೋರಿಸಿದ.

"ನಿನ್ನದಲ್ಲ, ನನ್ನ ಪಾಕೇಟು!" ಎಂದು ಅರಚಿದ, ಮೆಜಿಶಿಯನ್.

ನನ್ನ ಸಂಗಾತಿ ಬೆಪ್ಪುತಕ್ಕಡಿಯಂತೆ ಮುಖಮಾಡಿ, "ನಿನ್ನದು? ನಿನ್ನದು?... ............ದೇವಾ, ನನ್ನ ಪಾಕೇಟು ಅವನದಂತೆ! ಈ ಮಹಾಶಯನನ್ನು ನಂಬದೇ ನಾನು ಇಲ್ಲಿಳಿದಿದ್ದೇನೆ. ನೋಡಿದಿರಾ ಅವನ ಆಟ!" ಎಂದ.

"ನನ್ನ ಪಾಕೇಟ್ ಕಾಣೆ........" ಎಂಬ ಕೂಗು ಕೇಳಿಸಿತು, ಮೆಜಿಶಿಯನಿನಿಂದ. ರೈಲು 'ಕೂ' ಎಂದಿತು, ಬುಸುಗುಟ್ಟಿತು. ಭೂಶ್, ಭೂಶ್ ........ಬುಶ್, ಬುಶ್, ಬುಶ್................

* * * * *

ಹರಿಹರ ಸ್ಟೇಶನಿನ ಹೊರಗೆ ನನ್ನ ಸಂಗಾತಿಯೊಡನೆ ಹೇಳಿದೆ: "ನಿನ್ನ

ಪಾಕೇಟನ್ನು ಆ ಲುಚ್ಚ ಮೆಜಿಶಿಯನ್ ನನ್ನ ಕಿಸೆಯಿಂದ ತೆಗೆದ. ಈಗ ಅವನದೇ ಹೋಯಿತೆಂದು ಚೀರುತ್ತಿದ್ದಾನೆ."

"ಆದರೆ ಅದು ನಿಜವಲ್ಲ. ನಿಜವೆಂದು ನೀವು ನಂಬುತ್ತೀರೋ?........" ನನ್ನ ಸಂಗಾತಿ, ಆತುರದಿಂದ ನನ್ನನ್ನು ನೋಡುತ್ತ ಕೇಳಿದ. ಆತನ ದೃಷ್ಟಿಯಲ್ಲಿ ಆತುರ ಮಾತ್ರವಲ್ಲ, ಮತ್ತಾವುದೋ ತರದ ಭಾವವೂ ಅಡಕವಾಗಿತ್ತು.

ಫಕ್ಕನೇ ನನಗೇನೋ ಹೊಳೆಯಿತು. ನನ್ನ ಸಂಗಾತಿಯನ್ನು ನೋಡುತ್ತ "ಮಿತ್ರಾ, ಆ ಮೆಜಿಶಿಯನಿನಿಂದ ನಾನೂ ಐಂದ್ರಜಾಲ ಕಲಿತಿದ್ದೇನೆ!" ಎಂದೆ.

"ಅದೇನು?" ಎಂದು, ಚಕಿತನಾಗಿ ಕೇಳಿದ ನನ್ನ ಸಂಗಾತಿ.

"ಇದೋ........" ಎನ್ನುತ್ತ, ನನ್ನ ಸಂಗಾತಿಯ ಒಳಕಿಸೆಗೆ ಬಲವಾಗಿ ಕೈಹಾಕಿದೆ. ಒಂದು ಪಾಕೇಟು ಕೈಗೆ ಹತ್ತಿತು. ಅದನ್ನು ಹೊರಗೆಳೆದೆ.

ಅದು ಆ ಮೆಜಿಶಿಯನನ ಪಾಕೇಟ್ ಆಗಿತ್ತು! ಅದರ ಮೇಲೆ "ಪ್ರೊ| ದೀನ್" ಎಂದು ಬರೆದಿತ್ತು! ಕದ್ದವನು ನನ್ನ ಭೋಳೇ ಸಂಗಾತಿ! ಭೋಳೇ ಸಂಗಾತಿಯು ನಿಜವಾಗಿಯೂ ಚುರುಕಾಗಿದ್ದನು! ಅವನ ಭೋಳೇ ನಟನೆಯನ್ನೆಲ್ಲ ಸ್ಮರಿಸಿ ನನಗೆ ಮೈ ಝುಮ್ಮೆಂದಿತು.

"ನೀನು ಮಹಾಪ್ರವೀಣ! ಆ ಮೆಜಿಶಯನನ ಐಂದ್ರಜಾಲವನ್ನೆಲ್ಲ ಕಸಕ್ಕೆ ಕಡೆಮಾಡಿಬಿಟ್ಟ ವೀರ!" ಎಂದೆ.

"ದಮ್ಮಯ್ಯ, ನಾನು ಬಡವ!" ಎಂದ.

"ಆದರೆ, ನೀನು ಮಿದುಳಲ್ಲಿ ಬಡವನಲ್ಲ. ಮಾತ್ರ, ಈ ವೃತ್ತಿಯು ಪ್ರಪಂಚದ ಎಲ್ಲಾ ವೃತ್ತಿಗಳಲ್ಲಿ ಅತಿ ಬಡವಾದುದು!" ಎಂದೆ.

"ನನ್ನನ್ನು ತಾವು ಮರೆಯಬೇಕು!" ಎಂದ.

"ಎಂದಿಗೂ ಇಲ್ಲ. ಆದರೆ, ಹೆದರಬೇಡ!" ಎನ್ನುತ್ತ, ಆ ಪಾಕೇಟನ್ನು ನನ್ನ ಕಿಸೆಯಲ್ಲಿ ಭದ್ರವಾಗಿ ಇಟ್ಟುಕೊಂಡೆ.

* * * * *

ಮನೆಗೆ ಬಂದು ಮೀರೆಯೊಡನೆ ('ಮೀರೆ' ಎಂದರೆ ನನ್ನ ಪತ್ನಿ!) ಕೇಳಿದೆ. "ಮೀರಾ, ನನ್ನ ಕಿಸೆಯಿಂದ ತನ್ನ ಸಂಗಾತಿಯು ಪಾಕೇಟ್ ತೆಗೆದ

ಆ ಮೆಜಿಶಿಯನ್ ಒಬ್ಬ ಕಲಾವಂತ; ಆ ಮೆಜಿಶಿಯನನ ಪಾಕೇಟನ್ನೇ ಕದ್ದ ನನ್ನ 'ಬೋಳೀ' ಸಂಗಾತಿ ಹತ್ತುಪಾಲು ಕಲಾವಿದ; ಆದರೆ, ಅವನ ಕಿಸೆಯಿಂದ ಮೆಜಿಶಿಯನನ ಈ ಪಾಕೇಟನ್ನುಹೊರಡಿಸಿದ ನಾನು ಶತಗುಣಕಲಾವಂತನಹುದೋ ಅಲ್ಲವೋ ಹೇಳಬೇಕು—" ಎಂದು ಕೇಳಲು,—

"ಇವೆಲ್ಲ ಕಲೆಗಳಿಗಿಂತ, ಆ ಪಾಕೇಟನ್ನು ಆ ಮೆಜಿಶಿಯನನಿಗೇ ಪುನಃ ಕಳಿಸಿಕೊಡುವ ಕಲೆ ದೊಡ್ಡದು!" ಎನ್ನುತ್ತ,—ಆ ಪಾಕೇಟಿನೊಳಗೆ ಆ ಮೆಜಿಶಿಯನನ ಸ್ಥಿರವಿಳಾಸ ನೋಡಿ, ಅವನಿಗೇ ಅದನ್ನು ನನ್ನಿಂದ ಪಾರ್ಸೆಲ್ ಮಾಡಿಸಿ, ತಾನು ಸಹಸ್ರಗುಣಕಲಾವಿದೆಯೆನಿಸಿದಳು!

ಎಷ್ಟೆಂದರೂ ಹೆಂಗುಸು!

ಇಂತಿದು ಪಾಕೇಟುಗಳ ಪರ್ಯಾಯು!

ಒಂದೊಂದು ಒಳ್ಳೇ ಗುಣವೂ ಒಂದೊಂದು ಕಲೆ. ಒಳ್ಳೇ ಗುಣಗಳಿಗೆ ಪರ್ಯಾಯು ಬಾರದಿರಲಿ!

---

# ೧೬. ಜಗತ್ತಿನ ಸಣ್ಣ ಕಥೆ!

## ಮೊದಲನೆಯ ಅಧ್ಯಾಯ

ಸಂಪಾದಕರು ಓದಿದರು:

### ಶ್ಯಾಮು ಮಾಡಿದ ಉಪಾಯ

(ಲೇಖಕ: ಕಾವೂರು ಗೋವರ್ಧನ ರಾಯು)

"ಏ. ಆರ್. ಪಿ. ಆಫೀಸಿನಲ್ಲಿ ಶ್ಯಾಮಣ್ಣನು ಇಸ್ಪೀಟ್ ಪೆಟ್ಟಿಗೆ ಹಿಡಿದು, ಅತ್ತಿತ್ತ ನೋಡುತ್ತ ಸುಯ್ಯೆಂದು ನಿಟ್ಟುಸಿರಿಟ್ಟು, ಪೆಟ್ಟಿಗೆಯನ್ನು ಬಿಡಿಸಿ........"

ಸಂಪಾದಕರು ಕತೆಯ ಮೂಲಪ್ರತಿಯನ್ನು, ತನ್ನ ಎದುರಲ್ಲಿ ಕುಳಿತು ಆತುರದಿಂದ ನೋಡುತ್ತಿರುವ 'ಶ್ರೀಮಾನ್ ಕಾವೂರು ಗೋವರ್ಧನ ರಾಯು' ಇವರ ಕೈಯಲ್ಲಿಟ್ಟು, "ತಲೆಸಿಡಿತ! ಈ ಕತೆ ಅಷ್ಟೊಂದು—ಅಂದರೆ—ವಾಚಕರ ಮಟ್ಟಿಗೆ........ಒಟ್ಟಾರೆ ಇದನ್ನು ಕೊಂಚ ತಿದ್ದುಪಡಿಮಾಡಿ

ತನ್ನಿರಿ!'' ಎಂದರು. ಕತೆಗಾರನು ತನ್ನ ತಿರಸ್ಕೃತ ಕತೆಯೊಂದಿಗೆ ಹೊರಟು ಹೋದನು.

## ಎರಡನೆ ಅಧ್ಯಾಯ

ಸಂಪಾದಕರು ಮರುದಿನ ಓದಿದರು:

### ಶ್ಯಾಮುವಿನ ಇಸ್ಪೀಟ್ ಪೆಟ್ಟಿಗೆ

(ಲೇಖಕ: ಕಾವೂರು ಗೋವರ್ಧನ ರಾಯ)

"ಶ್ಯಾಮಣ್ಣನು ಏ. ಆರ್. ಪಿ. ಆಫೀಸಿನ ಹೊರಗೆ ನಿಂತು ಅತ್ತ ಇತ್ತ ನೋಡಿದನು. ಆಫೀಸಿನ ಮುಂದೆ ಗೋಡೆ; ಬದಿಗಳಲ್ಲಿ ಗೋಡೆಗಳು; ಇನ್ನು ಹಿಂದೆಯೂ ಒಂದು ಗೋಡೆಯಿತ್ತೆನ್ನಿ. ಅಂತೂ ಎಂಟು ಗೋಡೆಗಳ ಆಫೀಸು ಅದು. ಆಫೀಸಿನೊಳಗಿಂದ ಹೊಗೆ ಹೊರಡುತ್ತಿತ್ತು,— ಸಿಗರೇಟಿನದು. ಶ್ಯಾಮಣ್ಣನ ಕೈಯಲ್ಲೊಂದು ಇಸ್ಪೀಟ್ ಪೆಟ್ಟಿಗೆ........"

ಸಂಪಾದಕರು ಕಣ್ಣು ಕೆಂಪಗೆ ಮಾಡುತ್ತ, ಕತೆಯ ಮೂಲಪ್ರತಿಯನ್ನು ತನ್ನ ಎದುರಲ್ಲಿ ಕುಳಿತು ಅತ್ಯಾತುರದಿಂದ ನೋಡುತ್ತಿರುವ "ಶ್ರೀ| ಕಾವೂರು ಗೋವರ್ಧನ ರಾಯ" ಇವರ ಮುಂದೆ ಒಗೆದು, "ಮೈಯೆಲ್ಲ ನೋಯುತ್ತದೆ. ಇನ್‌ಫ್ಲುಯಂಜಾ ಎಂದು ಸಂದೇಹ. ಈ ಕತೆ ಇನ್ನೂ ಸ್ವಲ್ಪ ತಿದ್ದಿ........" ಎಂದರು. ಕತೆಗಾರನು ಅಷ್ಟರೊಳಗೇ ಅಲ್ಲಿಂದ ತೆರಳಿದ್ದನು.

## ಮೂರನೆಯ ಅಧ್ಯಾಯ

ಸಂಪಾದಕರು ಮೂರನೆ ದಿನ ಓದಿದರು:

### "ಶ್ಯಾಮೂ! ನೀನೆಲ್ಲಿರುವೆ!"

(ಲೇಖಕ: ಕಾವೂರು ಗೋವರ್ಧನ ರಾಯ)

"ಕಲ್ಲತ್ತಾಯರ ಏಕಮಾತ್ರ ಪುತ್ರ ಶ್ಯಾಮು. ದುಂಡಗಾದ ಮುಖ; ಉಬ್ಬಿದ ಎದೆ; ಬಾಚಿದ ಹೊಳಪಿನ ಕೂದಲು; ವಿಶಾಲವಾದ ಹಣೆ; ಕಾಲ್ತನಕ ಬೆಳ್ಳಗಿನ ಪಾಯ್ಜಾಮೆ; ಎಡ ಕೈಗೆ ಚಿಕ್ಕಾಸಿನ ಗಾತ್ರದ ಒಂದು ವಾಚ್; ಬಾಯಲ್ಲಿ ಹಾಲಿನಷ್ಟು ಬೆಳ್ಳಗಿನ ಹಲ್ಲುಗಳು; ಈ ಬೆಳ್ಳಗಿನ ಹಲ್ಲುಗಳು ಒಮ್ಮೊಮ್ಮೆ (ಘಂಟೆಗೈದು ಬಾರಿ) ಬೆಳ್ಳಗಿನ ಸಿಗರೇಟುಗಳನ್ನು ಕಚ್ಚಿ, ಬೆಳ್ಳಿಯ ಮೋಡಗಳನ್ನು ರಚಿಸುವವು.......ಅಂತು ಹುಡುಗನು ಇಂದಿನ

ಭಾರತದ ತರುಣ ಜನಾಂಗದ ನೈಜ ಪ್ರತಿನಿಧಿಯಾಗಿದ್ದನು. ಶ್ಯಾಮುವಿಗೆ, ಅವನ ೨೨ನೇ ಹುಟ್ಟು ಹಬ್ಬದ ದಿನ, ಅವನ ತಂದೆ, ಮಮತೆಯಿಂದ ಸೆಲ್ಲ ಲಾಯ್ಡ್ ಇಸ್ಪೀಟ್ ಪೆಟ್ಟಿಗೆಯನ್ನು ಉಡುಗೊರೆಯಾಗಿ ಕೊಟ್ಟಿದ್ದನು. ಶ್ಯಾಮು ಆ ಉಡುಗೊರೆಯನ್ನು ಹೆಮ್ಮೆಯಿಂದ ಏ. ಆರ್. ಪಿ. ಆಫೀ……………"

ಸಂಪಾದಕರು, "ಹಾಳಾಯಿತು!" ಎಂದರು. ಕವಿಯು, ಕಣ್ಣೆತ್ತಿ, ದೃಷ್ಟಿಯಿಂದಲೇ ಪ್ರಶ್ನಿಸಿದನು. ಸಂಪಾದಕರು ಬಾಯಿಯಿಂದ ಉತ್ತರ ವಿತ್ತರು; "ಹುಡುಗನನ್ನು ಹಾಗೆ ವರ್ಣಿಸಿದ ರೀತಿ……ಹೊಸದು! ಸೆಲ್ಲ ಲಾಯ್ಡ್……..ಕರ್ಮ……..ಅದೂ ಹೊಸದು! ಇನ್ನು ಆ 'ಏ. ಆರ್. ಪಿ.' ಇದೆಯಲ್ಲ……..ಇಲ್ಲ ನನ್ನಲ್ಲಿನ್ನು ತ್ರಾಣವಿಲ್ಲ!" ಎಂದರು. ಕವಿಗೆ ಮನಸ್ಸು ನೊಂದು ಬೆಂದುಹೋಯಿತು. ಪುನಃ ತನ್ನ ಕಣ್ಣುಗಳಿಂದಲೇ ಪ್ರಶ್ನಿಸಿದನು. ಸಂಪಾದಕರು ಬಾಯಿಯಿಂದಲೇ ಉತ್ತರ ಕೊಡಲಿಚ್ಛಿಸಿ, "ಈ ಕತೆಯು ತಿದ್ದುಪಡಿಯಾಗಬೇಕು!" ಎಂದರು. ಕವಿಯು ಈಗಲೇ ಮಾಯವಾಗಿದ್ದನು.

## ನಾಲ್ಕನೆಯ ಅಧ್ಯಾಯ

ಸಂಪಾದಕರು ನಾಲ್ಕನೆ ದಿನ ಓದಿದರು:

### ಶ್ಯಾಮುವಿನ ಕೊನೆಯ ಪತ್ರ

(ಲೇಖಕ: ಕಾವೂರು ಗೋವರ್ಧನ ರಾಯ)

"ಏ. ಆರ್. ಪಿ. ಆಫೀಸಿನಲ್ಲಿ ಕೋಲಾಹಲ. ವಿಮಾನ ದಾಳಿಯಾದ ಬಗ್ಗೆ ಅಲ್ಲ. ಮಿತ್ರಮಂಡಲಿಯೊಂದು ಕುಳಿತು ಇಸ್ಪೀಟಾಟದಲ್ಲಿ ಮಗ್ನವಾಗಿತ್ತು. ಮೂಲೆಯಲ್ಲೆರಡು ಬಾಲ್ದಿಗಳು—ಗೋಡೆಗೆರಡು ದಾಳಿಯ ಚಿತ್ರಗಳು—ಕೋಣೆಯ ನಡುವೆ ಮೇಜು—ಮೇಜಿನ ಸುತ್ತಲೂ ತರುಣರು—ತರುಣರ ಬಾಯಲ್ಲಿ ಸಿಗರೇಟುಗಳು, ಕೈಯಲ್ಲಿ ಇಸ್ಪೀಟ್ ಎಲೆಗಳು—ಶ್ಯಾಮು, ತಾನೂ ಒಂದು ಇಸ್ಪೀಟ್ ಪೆಟ್ಟಿಗೆ ಹಿ……..''

ಸಂಪಾದಕರು, ಕತೆಯ ಮೂಲಪ್ರತಿಯನ್ನು ಬಲವಾಗಿ ಮೇಜಿಗೆ ಒಗೆದರು. ಕತೆಗಾರನು ಗಡಗಡನೆ ನಡುಗಿದನು. ಅವನಿಗೆ ತನ್ನನ್ನೇ

ಮೇಜಿಗೆ ಬಡಿದಂತೆ ಭಾಸವಾಗಿತ್ತು. ಸಂಪಾದಕರು, ತಮ್ಮ ಫೌಂಟನ್ ಪೆನ್ನನ್ನು ಕಠಾರಿಯಂತೆ ಎತ್ತಿ ಕತೆಗಾರನ ಕಡೆಗೆ ತಿರುಗಿ........ಆದರೆ, ಕತೆಗಾರನು ಪಲಾಯನ ಮಾಡಿದ್ದನು!

## ಐದನೆಯ ಅಧ್ಯಾಯ

ಸಂಪಾದಕರು ಐದನೆ ದಿನ ಓದಿದರು:

### ಗೆಳೆಯನಿಗಾಗಿ ಕಣ್ಣೀರು

(ಲೇಖಕ: ಕಾವೂರು ಗೋವರ್ಧನ ರಾಯ)

"ಶ್ಯಾಮು ಇನ್ನೂ ತರುಣ. ಅವನ ದುರಭ್ಯಾಸವೆಂದರೆ ಸಿಗರೇಟು ಸೇದುವುದು; ಇಸ್ಪೀಟಾಡುವುದು. ಸ್ಥಳೀಯ ಏ. ಆರ್. ಪಿ. ಆಫೀಸಿನಲ್ಲಿ ನಿತ್ಯವೂ ಇಸ್ಪೀಟಿನ ಆಟವೂ ಸಿಗರೇಟುಗಳ ಯಜ್ಞವೂ ನಡೆದಿತ್ತು. ಆಫೀಸಿನ ವಾರ್ಡನನೂ ಅವನ ಮಿತ್ರರೂ ನಿತ್ಯವೂ ಸೇರಿ ಸಿಂಹಳ—ಬರ್ಮಾ—ಹಿಂದೂಸ್ಥಾನ—ಫಿಲಿಪ್ಪಾಯಿನ್ಸ್—ಜಾವಾ—ಮೊದಲಾದ ಕಡೆಗಳ ಹಾಡುಗಳನ್ನು ಶಿಳ್ಳಿನ ಮೂಲಕವೂ ಹುಂಕಾರದ ಮೂಲಕವೂ ಹಾಡುತ್ತಿದ್ದರು. ನಡುನಡುವೆ ಆವೇಶದಿಂದ ಕಾಲುಗಳಿಂದಲೂ ಕೈಗಳಿಂದಲೂ ನೆಲಕ್ಕೂ ಮೇಜಿಗೂ ಬಡಿದು ಶಬ್ದ ಮಾಡುತ್ತಿದ್ದರು. ಕೈಕಾಲುಗಳು ತಿರಸ್ಕರಿಸಿದಾಗ ತಮ್ಮ ಬೆನ್ನನ್ನು ಕುರ್ಚಿಯ ಬೆನ್ನಿಗೆ ಬಡಿದು ರೀಪುಗಳನ್ನೊಡೆಯುತ್ತಿದ್ದರು. ಈ ಉತ್ಪಾತಗಳಿಂದ, ಏ. ಆರ್. ಪಿ. ಆಫೀಸಿನ ಬಳಿಯ ಇತರ ಆಫೀಸುಗಳಲ್ಲಿ, ಕಾರಕೂನರಿಗೆ 'ನರ್ವಸ್ ಡೆಬಿಲಿಟಿ'—'ವೀಕ್ ಹಾರ್ಟ್' 'ಸೌಂಡ್ ಫೋಬಿಯಾ........"

ಸಂಪಾದಕರು ಆಶ್ಚರ್ಯಪಟ್ಟರು—"ಸೌಂಡ್ ಫೋಬಿಯಾ" ಎಂಬ ರೋಗವೊಂದಿದೆಯೆ?

"........ಮೊದಲಾದ ರೋಗಗಳುಂಟಾಗಲಾರಂಭಿಸಿದುವು. ಆದರೆ, ಏ. ಆರ್. ಪಿ. ಆಫೀಸಿನ ನಿರಪರಾಧಿ ತರುಣರಿಗೆ ಇದೊಂದೂ ತಿಳಿಯದು. ಜನರನ್ನು ಬೊಂಬ್ ಶಬ್ದ ಕೇಳಲು ತರಬೇತಿಗೊಳಿಸುವ ಸಲುವಾಗಿಯೇ ಅವರು ಹೀಗೆ ವಿಜಾತಿಯ ಶಬ್ದ ಮಾಡುತ್ತಿರುವರೋ ಎಂದೂ ಶಂಕೆಯುಂಟಾಗುವಂತಿತ್ತು. ಶ್ಯಾಮಣ್ಣನು ಸೆಲ್ಲುಲಾಯ್ಡ್ ಇಸ್ಪೀಟ್ ಪೆಟ್ಟಿಗೆಯೊಂದಿಗೆ ಅತ್ತ ಬ........"

ಸಂಪಾದಕರು 'ಡೆಮಿಟ್' ಎಂದು ಇಂಗ್ಲಿಷಿನಲ್ಲಿ ಬಯ್ಯುತ್ತ, ಕತೆಗಾರನ ಕೊಲೆಮಾಡುವೆನೆಂದು ಕುರ್ಚಿಯಿಂದ ಹಾರಿದರು. ಆದರೆ, ಕತೆಗಾರನು, ಆಫೀಸು ಕಿಟಕಿಯಿಂದ ಕೆಳಗೆ ಹಾರಿ, ಅಪಾಯದಿಂದ ದೂರವಾಗಿ ಆದಾಗಲೇ ಮೂರು ನಿಮಿಷಗಳು ಕಳೆದಿದ್ದುವು. ಸಂಪಾದಕರು, ರೋಷ ಸಹಿಸಲಾರದೆ, ಕತೆಯ ಮೂಲಪ್ರತಿಯನ್ನು ಚೂರುಚೂರಾಗಿ ಹರಿದು, ಕತೆಗಾರನು ತಪ್ಪಿಸಿ ಓಡಿದ ಆ ಕಿಟಕಿಯ ಮೂಲಕ ಹೊರಗೆ ಬಿಸುಡಿ, ಕೈಗಳನ್ನುಜ್ಜಿ, ಸಿಗರೇಟಿನ ಬದಲಾಗಿ ಬೆಂಕಿಪೆಟ್ಟಿಗೆಯನ್ನು ಬಾಯಲ್ಲಿಟ್ಟು ನೆಲಕ್ಕೆ ಬಡಿದು, ಕೋಪ ಹೆಚ್ಚಿ ಕೆಲಸದ ಹುಡುಗನನ್ನು ಕರೆದು, ಒಂದೂಕಾಲು ನಿಮಿಷದೊಳಗೆ ಹೊಟೇಲು ಹುಡುಗನು ಬಿಸಿ ಟೀ ತಾರದಿದ್ದರೆ ತಾನು ಐದಾರು ಮಂದಿಯ ಕುತ್ತಿಗೆ ಹಿಸುಕುವೆನೆಂದು ಗುಡುಗುಡಿಸಿದರು. ಟೀ ಬರುತ್ತಲೇ ಕುಡಿದು, ಒಂದು ಕಾಗದ ತೆಗೆದು, ಅದರಲ್ಲಿ "ಲೇಖಕ ಕಾವೂರು ಗೋವರ್ಧನರಾಯ—ಬಂದರೆ ಮನೆಗೆ ಕನ್ನಹೊಡೆಯಲು ಬಂದ ಆಪಾದನೆಯಲ್ಲಿ ಹಿಡಿಸಿ, ಪೋಲಿಸರಿಗೊಪ್ಪಿಸಲಾಗುವುದು" ಎಂದು ಬರೆದು, ಪುನಃ ಆಫೀಸ್ ಹುಡುಗನನ್ನು ಕರೆದು "ಇದನ್ನು, ನನ್ನ ಕೋಣೆಯ ಬಾಗಿಲಿಗೆ ಹಚ್ಚಿಬಿಡು!" ಎಂದರು.

## ಆರನೆಯ ಅಧ್ಯಾಯ

ಸಂಪಾದಕರು ಆರನೆ ದಿನ ಓದಿದರು:

### ಜಗತ್ತಿನ ಅತಿ ಚಿಕ್ಕ ಕಥೆ

(ಬರೆಪವ: ಕಲ್ಲು.)

"ಹುಡುಗ—ಶ್ಯಾಮು—ತಂದೆತಾಯ್ಗಳ ಮುದ್ದಿನ ಮರಿಯಾಗಿ ಬೆಳೆದನು. ತಿದ್ದುವವರು ತಿದ್ದದೆ, ಕುಪಥದಲ್ಲಿ ನಡೆದು, ಇಸ್ಪೀಟ್ ಆಟ ಕಲಿತು, ಜೂಜಿಗೆ ತಿರುಗಿ, ನಿರುದ್ಯೋಗಿಯಾಗಿ, ತಾನು ಆಟವಾರಂಭಿಸಿದ ಏ. ಆರ್. ಪಿ. ಮಿತ್ರರೂ ಅವನನ್ನು ದುಷ್ಟನೆಂದು ದೂರೀಕರಿಸಲು ಕುಡಿಕನಾಗಿ, ಅಪ್ರಾಯದಲ್ಲೆ ತಂದೆ ಸಾಯಲು, ತಾಯಿಯೊಡನಿದ್ದ ಬದುಕನ್ನೆಲ್ಲ ವ್ಯಯಿಸಿ, ವೇಶ್ಯಾಲಂಪಟನಾಗಿ, ಊರೂರು ತಿರುಗಿ, ಕೊನೆಗೆ, ತಾನು ಚಿಕ್ಕ ಪ್ರಾಯದಲ್ಲಿ ಪ್ರೀತಿಸಿದ ರಾಧೆಯ ಮನೆಗೆ ಬಂದು ಅವಳೊಡನೆ

ಕ್ಷಮಾಯಾಚನೆ ಮಾಡಿ, ತನ್ನ ತಾಯಿ ಸತ್ತ ವದಂತಿ ಕೇಳಿ, ಅಲ್ಲಿ ಹೃತ್ಕ್ರಿಯೆ ಮುಗಿದು ಬಿದ್ದನು. ಶವವನ್ನು ಪರೀಕ್ಷಿಸಲಾಗಿ, ಕಿಸೆಯೊಳಗೆ ಒಂದು ಇಸ್ಪೀಟ್ ಪೆಟ್ಟಿಗೆ ದೊರೆಯಿತು. ಅದರೊಂದಿಗೇ ಒಂದು ಪತ್ರ. ಪತ್ರದಲ್ಲಿ ಎರಡೇ ಪಂಕ್ತಿಗಳು: "ಇಸ್ಪೀಟ್ ಪೆಟ್ಟಿಗೆಯು ಮಾನವನಿಗೆ ಹಿಟ್ಲರನಿಗಿಂತ ದೊಡ್ಡ ಶತ್ರು. ಮೊದಲು ಇಸ್ಪೀಟ್ ಪೆಟ್ಟಿಗೆಯನ್ನು ನಾಶಮಾಡಿರಿ!"

ಸಂಪೂರ್ಣ.

ಸಂಪಾದಕರ ಮುಖವರಳಿತು. ಕಂಪೋಜಿಟರರನ್ನು ಕರೆದು, ಆ ಕತೆಯನ್ನು ಕೊಟ್ಟರು.

### ಏಳನೆಯ ಅಧ್ಯಾಯ

ಸಂಪಾದಕರು ಏಳನೆ ದಿನ ಆಶ್ಚರ್ಯದಿಂದ ಓದಿದರು: "ನನ್ನ ಕತೆಯನ್ನು ಪ್ರಕಟಿಸಿದುದಕ್ಕೆ ಸಂತೋಷ. ನಿಮಗೆ ಯಾವ ರೀತಿಯ ಕತೆ ಬೇಕೆಂದು ತಿಳಿಯಿತು. ಇನ್ನು ಇದೇ ರೀತಿ ಬರೆಯುವೆನು."

ಲೇಖಕ: ಕಾವೂರು ಗೋವರ್ಧನ ರಾಯ.

---

## ೧೭. ಆದರ್ಶನೊಬ್ಬನೇ!

'ನಮ್ಮೂರು;' ಅಷ್ಟೆ. ಹೆಸರು ಹೇಳಲಾರೆ. ಹೆಸರಿನಲ್ಲೇನಿದೆ? ನಮ್ಮೂರನ್ನು ನೀವು ಹೇಗೆ ಕರೆದರೂ ಅದು ಅದೇ. ನಮ್ಮೂರು.

ಆದರೆ, 'ಹೆಸರಿನಲ್ಲೇನಿದೆ?' ಎಂಬುದನ್ನು ಗಾಂಧೀಜಿಯವರು ಮಾತ್ರ ಒಪ್ಪಲಿಲ್ಲ. ಹೊಲೆಯರನ್ನು 'ಹರಿಜನ'ರೆಂದೇ ಕರೆದರು. ಏನಾದರೇನು? ಹೆಸರಿನಲ್ಲೇನಿದೆ? ಹೊಲೆಯರನ್ನು ಹೇಗೆ ಕರೆದರೂ ಅವರು ಅವರೇ; ಹೊಲೆಯರು.

ಸುಧಾರಕರಿರುವರು. ಇವರು ಸನಾತನಿಗಳಿಗೆ ಸೊಪ್ಪು ಹಾಕುವವರಲ್ಲ. ಅಥವಾ ಸೊಪ್ಪನ್ನು ತಿನ್ನುವಂತಹ ವಿಜಾತೀಯ ಅಚ್ಚಿನಲ್ಲಿ ದೇವರು

ಇವರನ್ನು—ಸನಾತನೀದ್ರಾವಕವನ್ನು—ಹೊಯ್ಯಲಿಲ್ಲ. ಈ ಸುಧಾರಕರನ್ನು ನೀವು ಹೇಗೆ ಕರೆದರೂ, ಅವರು ಅವರೇ—ಸುಧಾರಕರು.

ಆ ಸನಾತನಿಗಳೊಂದು ಕಡೆ. ಈ ಸುಧಾರಕರೊಂದು ಕಡೆ, ಹೀಗೆ ನಿಂತು ಹೋರಾಡುವಾಗ, ಅವರದನ್ನು ಪ್ರಾಗಲ್ಭ್ಯವೆಂದೂ ಇವರದನ್ನು ಬರೇ ದುಷ್ಟ ಹಟವೆಂದೂ ಕರೆವ 'ತಟಸ್ಥಕೂಟ' (ಅಥವಾ 'nuetral' ಎಂಬ ನಪುಂಸಕ ಸಮೂಹ)ವೊಂದೂ ಇದೆ. ಹೇಗಿದ್ದರೂ ಅದು ಅದೇ. ಇದು ಇದೇ. ಅವರ ತಾತ್ಸಾರದ ನೂಕಾಟ, ಇವರ ಮಮತೆಯ ಸೆಳೆದಾಟ, ಇವುಗಳಲ್ಲಿ ಈ ಹೊಲೆಯರು—ಅಥವಾ ಹರಿಜನರು--ನಡೆಯಲರಿಯದೆ ಎಡವಿ ಬಿದ್ದು ಮೈ—ಕೈಗಳು ಗಾಯವಡೆದು ಬದುಕಿ ಉಳಿದರೆ ಅವರನ್ನು ದೇವರೇ ಕಾಪಾಡಬೇಕು ಎಂಬುದನ್ನು ಹೇಳುವ ತಂಡವೊಂದು ಈಗಾಗಲೇ—ತಲೆ ಕೆಳಗಾಗಿ, ಕಾಲನ್ನು ಮುಂದೆ ದೂಡಿ, ಮೇಲೇರಿ ಬರುತ್ತಿದೆ. ಈ ಮೂರು-ನಾಲ್ಕು ತಂಡಗಳಲ್ಲಿ ಯಾವುದನ್ನು ನಂಬಬೇಕೆಂದು ತಿಳಿಯಲಾರದೆ ಸತ್ಯ-ಮಿಥ್ಯಗಳ ತಾರತಮ್ಯವನ್ನು ಕಾಣಲಾಶಿಸಿ ಕುಳಿತವರು ತಮ್ಮ ಸ್ವೈರಣೆ-ವಿವೇಕ-ಮಿದುಳುಶಕ್ತಿಗಳನ್ನು ಮಾರಿ; ಖಾದಿ ಧರಿಸಿ ದಣಿದು; ಹೊಲೆಯರನ್ನು ಮುಟ್ಟಿ ಕೈತೊಳೆದು; ಅವರೊಂದಿಗೆ ಊಟಮಾಡಿ ಹೊಟ್ಟೆಯನ್ನು ತೊಳೆದು; ಸ್ವಾಮಿಜಿಯವರು ಕೊಟ್ಟ "ಪ್ರಾಯಶ್ಚಿತ್ತ"ದ ತೀರ್ಥ ಕುಡಿದು; ಅವರವರಿಗೆ ದಾನಕೊಟ್ಟು ಇವರವರಿಂದ ತಃವೇ ಪಡೆದು; ಕೊನೆಗೆ ತಾನು-ತನ್ನಾಕೆ-ತನ್ನವರ ಹೊರತು ಉಳಿದುದೆಲ್ಲ ಮಿಥ್ಯವೆಂದು ತೀರ್ಮಾನಿಸಿಕೊಂಡು, ಪುನಃ ತಮ್ಮ ಬಂಗಲೆ ಸೇರಿ ಕುಳಿತವರಿರುವರು. ಇವರೆಲ್ಲ ಇವರೇ—ತುಫಾನಿನ ಮಕ್ಕಳು.

ಆಹುದು,—ದೊಡ್ಡ ತುಫಾನು ಅದು. ಯೆರವಾಡದ ಉಷ್ಣದ ಹವೆಯಲ್ಲಿ ಕುಳಿತು ಚಳಿಗಾಲದಲ್ಲೂ ದಲ್ಪಟ್ಟುದು. ಸುಧಾರಕರಿಗೆ ಉತ್ಸಾಹವರ್ಧಕವಾದ ನವಚೇತನವನ್ನೂ ಸನಾತನಿಗಳಿಗೆ ಉಷ್ಣವಾತ ಪ್ರವಾಹವನ್ನೂ ತಟಸ್ಥ ತಂಡದವರಿಗೆ ನೆರೆಯನ್ನೂ ತಂದಿತು. ಗಾಂಧಿಜಿಯವರು ಅಲ್ಲಿ ಉಪವಾಸ ಹಿಡಿದರೆಂಬ ವಾರ್ತೆ ಇಲ್ಲಿಗೆ ತಲಪಿದ ೧೨ ನಿಮಿಷ ೪೫ ಸೆಕುಂಡುಗಳಲ್ಲಿ ಇಲ್ಲೊಂದು ಉಪವಾಸ; ಬೊಂಬಾಯಿಯಲ್ಲೊಂದು ಹರಿಜನ ಸೇವಾಸಂಘ ಸ್ಥಾಪನೆಹೊಂದಿತೆಂದು ಸುದ್ದಿ ಕೇಳಿದ ಅರ್ಧತಾಸಿನಲ್ಲಿ

ಇಲ್ಲೊಂದು ಸಂಘ; ಅಲ್ಲಲ್ಲಿ ಮೆರವಣಿಗೆಗಳಾದುವು ಎಂಬುದನ್ನು ಸಾಯಂಕಾಲ ೪||ಗೆ ಬಂದ ಪತ್ರಿಕೆಯಲ್ಲೋದುತ್ತಲೇ ಅದೇ ದಿನ ಒರೊಳಗೆ ನಮ್ಮೂರಲ್ಲಿಯೂ ಒಂದು ಮೆರೆವಣಿಗೆ; ಮರುದಿನ ಸಭೆ; ಫಲಾಹಾರ (ಮಿಶ್ರ) ಇತ್ಯಾದಿ.

ಹಾಗೆಲ್ಲ ನಡೆದೇ ಹೋಯಿತು. ಸಂಘ ಸ್ಥಾಪನೆಯಾಗಿ, ಕಾರ್ಯಕಾರಿ ಮಂಡಳಿಯ ನೇಮಕವೂ ಆಯಿತು. ವಕೀಲ ವಿಕ್ರಮರಾಯರು (ಅಧ್ಯಕ್ಷ); ವಕೀಲ ಪಾಂಡುರಂಗರಾವ್ (ಕಾರ್ಯದರ್ಶಿ); ಬ. ಕೃಷ್ಣ ನಾಯ್ಕ (ಜಂಟಿ ಕಾರ್ಯದರ್ಶಿ); ವೇ. ಸುದಾಮ ಪ್ರಭು (ಕೋಶಾಧ್ಯಕ್ಷ); ಆ ಮೇಲೆ ಶ್ರೀ| ಲಕ್ಷ್ಮೀನಾರಾಯಣರಾಯರು, ಬಲರಾಮ ಶೆಟ್ಟಿಯವರು, ಕುಂಞಣ್ಣ ಆಳ್ವರು, ಸುಬ್ಬಯ್ಯ ಮಾಲನ್‌ರು, ಬಿಂಕಯ್ಯ ರೈಯವರು—ಪ್ರಚಾರಕರು.

ಕೊಲೇಜಿನ ಪ್ರೊಫೆಸರರೊಬ್ಬರನ್ನು "ಓರ್ಗನೈಝರ-ಇನ್-ಚೀಫ್" ಎಂದು ನಾಮಕರಣಮಾಡಿದರು. ಅಷ್ಟು ಉದ್ದ ಹೆಸರು ಕೊಟ್ಟ ಕಾರಣ ಇವರು ದಿನಕ್ಕೆ ಸಾಧ್ಯವಿದ್ದಷ್ಟು ಹೊಲೆಯರನ್ನು ಪ್ರಯತ್ನಪೂರ್ವಕವಾಗಿ ಸ್ಪರ್ಶಿಸಲೇ ಬೇಕೆಂದು ಪರಸ್ಪರ ಅಂತರಂಗಗಳಲ್ಲಿ ಒಪ್ಪಿಗೆ.

ಅಧ್ಯಕ್ಷರಾದವರು: ಹೊಲೆಯನನ್ನು ಮುಟ್ಟಲೂ ಬಹುದು, ಮುಟ್ಟದಿರಲೂ ಬಹುದು. ಅದು ಅವರಿಗೆ ಅನುಕೂಲತೆಯಿದ್ದಂತೆ. ಆದರೆ, ಇತರರು ಮುಟ್ಟಿದರೆ ಶಿಫಾರಸು ಬರೆಯುವುದೂ, ಮುಟ್ಟದಿದ್ದರೆ ಮುಂದಾದರೂ ಮುಟ್ಟುವಂತೆ ಸೂಚನೆ ಬರೆಯುವುದೂ ಅವರ ಕೆಲಸ.

ಕಾರ್ಯದರ್ಶಿಯವರು: ಇವರು ಮುಟ್ಟಲೇ ಬೇಕು. ಹೊಲೆಯರು ಸಿಕ್ಕದಿದ್ದರೆ ಅವರ ವಸಾಹತುಗಳಿಗಾದರೂ ನಡೆದುಕೊಂಡು ಹೋಗಿ, ಹಸಿವಿಂದ ಜಗತ್ತನ್ನೇ ಭಕ್ಷಿಸುವೆನೆಂದು ಕುಳಿತ ಆ ಹೊಲೆಯನ ನಾಯಿಯನ್ನು ಸಾಮ-ದಾನ-ಭೇದ-ದಂಡಗಳಿಂದ ಗೆದ್ದು, ಮನೆಹೊಕ್ಕಿ ಅಲ್ಲಿದ್ದವರನ್ನು ಮುಟ್ಟಿ ಬರಲೇ ಬೇಕು.

ಜಂಟಿಕಾರ್ಯದರ್ಶಿಯವರು: ಇವರು ಕಾರ್ಯದರ್ಶಿಗಳನ್ನು ಮುಟ್ಟಬೇಕು. ಆ ಮೇಲೆ, ಯಾರು, ಎಲ್ಲಿ, ಯಾವ ಹೊಲೆಯನಿಗೆ ಟೊಪ್ಪಿಯಿಟ್ಟರೆಂದೂ, ಅಂಗಿ ಕೊಟ್ಟರೆಂದೂ, ಎಂಜಲೆಲೆ ಹಾಕದೆ ಒಳ್ಳೆಯ

ಎಲೆಯನ್ನೆ ಬಿಸಾಡಿದರೆಂದೂ ತಿಳಿದುಕೊಂಡು, ಅದನ್ನು ಬರೆದಿಡಬೇಕು. ಲೆಖ್ಖಪತ್ರಗಳನ್ನಿಡುವ ಕೆಲಸವೂ ಇವರಿಗೇ.

ಕೋಶಾಧ್ಯಕ್ಷರು: 'ನಿರ್ಲಿಪ್ತ' ಮಹಾನುಭಾವರೇ ಇವರು. ಅಲ್ಲಿ-ಇಲ್ಲಿ-ಎಲ್ಲಿಂದ ಬಂದ ಹಣವನ್ನಾದರೂ ಇವರು ಜೋಪಾಸನ ಮಾಡುವರು. ಹೊಲೆಯರೇ ಇವರನ್ನು ಮುಟ್ಟುವರಾದ ಕಾರಣ ಇವರಾಗಿ ಅವರನ್ನು ಮುಟ್ಟುವ ಪರಿಶ್ರಮ ವಹಿಸಬೇಕಾಗಿಲ್ಲ.

ಪ್ರಚಾರಕರು: ಇವರು ಸರ್ವವ್ಯಾಪಕರಾಗಿರಬೇಕಾದ ಕಾರಣ 'ಮುಟ್ಟಬೇಕು' ಎಂಬ ನಿಬಂಧನೆಯನ್ನು ಇವರಿಗೆ ಲಗಾವಾಗಿಸಬೇಕೆಂಬ ಅವಶ್ಯಕತೆಯಿಲ್ಲ. ಹೊಲೆಯರ ವಸಾಹತಗಳಲ್ಲೇ ದಿನಕ್ಕೆಂಟು ತಾಸು ಇವರ ಜೀವನ. ಶುಚಿತ್ವ ವಿಚಾರವನ್ನು ಬೋಧಿಸುವುದೇ ಇವರ ಕೆಲಸ. ಅವರು ಸ್ನಾನಮಾಡದಿದ್ದರೆ ಮಾಡುವಂತೆ ಪ್ರೇರೇಪಿಸಿ, ಮಾಡಿದರೆ ಮಾಡಿದುದು ಸರಿಯಾಗಿಲ್ಲವೆಂದು ಆಕ್ಷೇಪಿಸಿ, ಅವರನ್ನು ಬಚ್ಚಲಕೊಟ್ಟಿಗೆಗೊಯ್ದು (ವಸಾಹತಗಳಲ್ಲಿ ಬಚ್ಚಲು ಕೊಟ್ಟಿಗೆಗಳಿಲ್ಲದಿದ್ದರೆ ಬಾವಿಯ ಬಳಿಯಲ್ಲಿ) ಸ್ನಾನಮಾಡಿ ತೋರಿಸಿ, ಅವರಿಂದ ಮಾಡಿಸಿ, ಸ್ನಾನದ ಪಾಠ ಕೊಡುವುದು. ಆಹಾರದ ಕ್ರಮಗಳನ್ನೂ ವಸ್ತುಗಳನ್ನೂ ಹೇಳಿಕೊಡುವುದು. ಗುಪ್ತಧನವೇ ವಿದ್ಯೆಯೆಂದು ತಿಳಿಸಿ, ಚಂದ್ರಗುಪ್ತನಿಂದ ಸೇನಗುಪ್ತನ ತನಕ ನಡೆದ ವಿದ್ಯಾಪ್ರಗತಿಯ ಇತಿಹಾಸವನ್ನು ಐದು ಪಂಕ್ತಿಗಳಲ್ಲಿ ಮಡಗಿ ತಿಳಿಸಿ, ಶಾಲೆಗೆ ಹೋಗಿರೆಂದು ಒತ್ತಾಯಪಡಿಸುವುದು. ಆಮೇಲೆ ಸುತ್ತುಮುತ್ತಲಿನ ಸೃಷ್ಟಿಯ ಕುರಿತಾಗಿ ಹೇಳುತ್ತ, ದೃಷ್ಟಿ-ವೃಷ್ಟಿ-ಸೃಷ್ಟಿಗಳೆಂದರೇನೆಂದು ವಿವರಿಸುವುದು; ಅದಾಗಿ, ದೇಶದ ಇತಿಹಾಸವನ್ನು ಪ್ರಸ್ತಾಪಿಸುತ್ತ, ಕೋಳಿತತ್ತಿಯಷ್ಟಿದ್ದ ರತ್ನವನ್ನು ರಾಮರಾಜನು ತನ್ನ ಕುದುರೆಯ ತಲೆಗಿಟ್ಟದ್ದನೆಂಬುದನ್ನು ವಿವರಿಸಿ, ಜನರಲ್ಲಿ ರಾಜ-ಅಶ್ವ-ರತ್ನಗಳ ಮೇಲೆಯೂ, ಅವುಗಳು ಉರುಳಾಡಿದ ನೆಲದ ಮೇಲೆಯೂ ಏಕಪ್ರಕಾರ ಭಕ್ತಿ ಹುಟ್ಟಿಸುವುದು; ಹರಿಜನರನ್ನೂ ಮೇಲ್ ಜಾತಿಯವರನ್ನೂ ಬೆರೆಸಿ ಸಭೆಗೂಡಿಸಿ, ವಂತಿಗೆಯೆತ್ತಿ ಹಣತರುವುದು; ಇತ್ಯಾದಿ.

* * * * *

ಹರಿಜನ ಸೇವಾಸಂಘದ ಕಾರ್ಯಕಾರಿಮಂಡಳಿಯವರು ಪಂಚಮರ

ಶಾಲೆಯಲ್ಲೊಂದು ಕೊಠಡಿಯಲ್ಲಿ ಕುಳಿತು, ಒಂದು ಗುಪ್ತ ಸಭೆ ನಡೆಸಿದರು. ಮೂರು ತಿಂಗಳಲ್ಲಿ ತಾವು ಮಾಡಿದ ಕಾರ್ಯವೇನು, ಇನ್ನು ಮಾಡಬೇಕಾದುದೇನು?—ಎಂಬುದು ಚರ್ಚೆಯ ವಿಷಯ.

ದೇವಾಲಯ ಪ್ರವೇಶವು ಪ್ರಕೃತಸ್ಥಿತಿಯಲ್ಲಿ ಅಸಾಧ್ಯವೆಂದು ಅವರಿಗೆ ಗೊತ್ತು. ಅಂದು ಅವರು ಐವರು ಹೊಲೆಯರನ್ನು ಕೂಡಿ ದೇವಾಲಯ ಪ್ರವೇಶಕ್ಕೆ ಹೋದಾಗ, ಇದನ್ನು ಮೊದಲೇ ಕೇಳಿ ತಿಳಿದ ಉದ್ದಕಾಲಿನ ಮೊಕ್ತೇಸರರು ಧರ್ಮಕ್ಕಾಗಿ ಪ್ರಾಣವನ್ನೇ ಬಿಡುವೆನೆಂದು ಕೂಗಾಡಿ ಸಾರಾಯಿಕುಡಿದೇ ದೇವಾಲಯದ ಹೊಸ್ತಿಲಲ್ಲಿ ನಿಂತು ಮತ್ತಷ್ಟು ಉದ್ದರಾಗಲು,—ಭಜನೆ ಗೀತಗಳನ್ನು ಹಾಡುತ್ತ ಮೆಲ್ಲಗೆ ಅತ್ತ ಬಂದ ಇವರೆಲ್ಲ ಆ ಉದ್ದ ವೀರನ ಕೆಂಪು ಮೂಗನ್ನು ನೋಡಿ "ಡೇಂಜರ್" ಎಂದು ಕೂಡಲೆ ತಿಳಿದು, ಉದ್ದ ಕಾಲುಗಳನ್ನು ನೋಡಿ ಕಂಗಾಲಾಗಿ, ತಮ್ಮ ಹಾಡನ್ನು ಬದಲಾಯಿಸಿ—"ಕಂಡೆಕೋದಂಡ ಸ್ವಾಮಿಯ ದಿವ್ಯಚರಣ" ಎಂದು ಹಾಡುತ್ತ ಮರಳುವಾಗ, ಆಗಲೇ ಆ ಕಡೆಯಿಂದ ಧಾವಿಸಿ ಬರುತ್ತಿದ್ದ ಮುನಿಸಿಪಲ್ ಲೋರಿಯ ಕೆಳಗೆ ಬೀಳಲಿದ್ದವರನ್ನು "ದಿವ್ಯಚರಣದ ಕೋದಂಡ ಸ್ವಾಮಿ"ಯ ಹಿಂದೆ ನಿಂತ ದೇವರೇ ಕಾಪಾಡಿದ್ದನು. ಇನ್ನು ಆ ಸಾಹಸಕ್ಕೆ ಕೈ ಹಚ್ಚುವವರು ಇವರೇ? ಹರಿಜನರ ಉದ್ಧಾರವಾಗಲೇ ಬೇಕಾದರೂ ಇವರೆಲ್ಲರ ಕೈ-ಕಾಲು-ಮೂಗು-ಮುಸುಡಿಗಳೆಲ್ಲ ಒಡೆಯಲೇ ಬೇಕೆ?

ವಕೀಲ ವಿಕ್ರಮರಾಯರು ತಮ್ಮ ಖಾದಿ ಅಂಗಿಯೊಳಗೆ ಕೈ ಹಾಕುತ್ತ, ತೋರ್ಬೆರಳು—ಹೆಬ್ಬೆಟ್ಟುಗಳ ಚಿಮುಟಿಗೆಯಲ್ಲಿ ಒಂದು ತಗಣೆಯನ್ನು ಹಿಡಿದೆಳೆದು, "ಅಹುದು, ಮೂರು ತಿಂಗಳಾಯಿತು. ನಾವು ಮಾಡಿದುದೇನು ಎಂದು ಈಗ ವಿಮರ್ಶೆ" ಎಂದರು.

ಪಾಂಡುರಂಗರಾಯರು ಮುಗುಳ್ನಗೆ ನಗುತ್ತ, ತಮ್ಮ ಸುಲೋಚನಗಳನ್ನು ತೆಗೆದು, ತನ್ನ ಧೋತಿಯಿಂದೇ ನೆನೆದು ತನ್ನ ಬಳಿಯಲ್ಲಿ ಕುಳಿತ ಸುದಾಮ ಪ್ರಭುಗಳ ಧೋತಿಯಿಂದದನ್ನುಜ್ಜುತ್ತ, "ನಾವು ಮಾಡಿದುದೇನೂ ಇರಲಿ; ಮುಂದೆ ಮಾಡುವದೇನು?" ಎಂದು ಕೇಳಿ, ತನ್ನ ಪ್ರಶ್ನೆಯ ಗಾಂಭೀರ್ಯವನ್ನೆಲ್ಲರೂ ಗುರುತಿಸಿದರೋ ಎಂದು ನೋಡಲು ಈ

ರಾಯರಿಂದ ಆ ರಾಯರ ತನಕ ಒಮ್ಮೆ ತಲೆಯನ್ನು ಚಕ್ರಾಕಾರವಾಗಿ ತಿರುಗಿಸಿದರು.

ವಿಕ್ರಮರಾಯರಿಗೆ ವಿಶೇಷವಾಗಿ ಚುಚ್ಚಿದಂತಾಯಿತು. ಯಾವುದಾದರೂ ಕಾರ್ಯದ ಯಶಃ—ಅಪಯಶಸ್ಸುಗಳ ಹೆಚ್ಚಿನ ಅಂಶವು ಅಧ್ಯಕ್ಷರ ಹೆಸರಲ್ಲಿ ಸಲ್ಲುತ್ತದೆಯೆಂದು ಅವರು, ಚಿಕ್ಕಂದಿನಲ್ಲಿ ಹಲ್ಲು ಮೂಡಿ ಉದುರುವಷ್ಟರಲ್ಲೆ ಚೆನ್ನಾಗಿ ಮನವರಿಕೆ ಮಾಡಿಕೊಂಡಿದ್ದರು. ಈಗ, ತಮ್ಮ ಬೆರಳುಗಳ ನಡುವೆ ಪ್ರಾಣಸಂಕಟದಿಂದ ಚಡಪಡಿಸುತ್ತಿದ್ದ ತಗಣೆಯನ್ನು ಚಟ್ಟನೆ ಜಜ್ಜಿ, ನಶ್ಯವೆಂದು ನೆನೆದು ಮೂಗಿಗೊಯ್ಯುತ್ತ, "ಅಹುದು, ಇನ್ನು ಏನು ಮಾಡಬಹುದು?" ಎಂದು ಅಧ್ಯಕ್ಷ ಕಂಠದ ಗಾಂಭೀರ್ಯದಲ್ಲಿ ಕೇಳಿ,—ಆಗಲೇ ಮೂಗಿನ ಸೊಳ್ಳೆಗಳು ಈ ಹೊಸ ನಶ್ಯಕ್ಕಾಗಿ ನಿಷೇಧ ತೋರ್ಪಡಿಸಿದುದು ಭಾಸವಾಗಲು ಫಕ್ಕನೆ ಕೈ ಬೆರಳುಗಳನ್ನು ತೆರೆದು ನೋಡಿ, ತಗಣೆಯ ಕೊಲೆಯಾಯಿತೆಂದು ತಿಳಿದು, ಬೆರಳುಗಳನ್ನು ಪುನಃ ಆ ಖಾದಿ ಅಂಗಿಗೊಯ್ದು ತಿಕ್ಕಿ, ಅನಾಥಪ್ರೇತಸಂಸ್ಕಾರ ಮಾಡಿ ಮುಗಿಸಿದ ಆನಂದದಿಂದ ಮುಖವರಳಿಸಿದರು.

ಸುದಾಮ ಪ್ರಭುಗಳು "ಮಾಡಲೇ ಬೇಕು" ಎಂದರು.

ಕೃಷ್ಣನಾಯಕರು "ಅಹುದಹುದು; ಏನಾದರೂ........" ಎಂದರು.

ಲಕ್ಷ್ಮೀನಾರಾಯಣರಾಯರು "ಮಾಡುವುದೇನು?" ಎಂದರು.

ಬಿಂಕಯ್ಯ ರೈಯವರು ಇಷ್ಟರ ವರೆಗೆ ಮೌನವಾಗಿಯೆ ಕುಳಿತಿದ್ದರು. ಓಮಾರಖಯ್ಯಾಮನಂತೆ ಅಖಂಡ ಮಿದುಳಿನವರಿವರು; ತಪಸ್ವಿಗಳು; ಕವಿಗಳು. ಇವರ ಮಿದುಳು ಮಾತ್ರ ಈ ತನಕ ಯಾವ ವೈಜ್ಞಾನಿಕನ ಕಣ್ಣಿಗೂ ಬಿದ್ದಿರಲಿಲ್ಲವಾದ ಕಾರಣ ಅದೇ ಚಿಕ್ಕ ತಲೆಯಲ್ಲಿ ಮಡಗಿ ಉಳಿದಿತ್ತು. ಇವರ ತಪಸ್ಸಿನ ಪ್ರಭಾವವೂ ಹಾಗೆಯೇ;-ಮೌನ ತಪವಾದ ಕಾರಣ ಅಂತಿಂತಹ ಮಾನವರಿಗೆ ತಿಳಿಯದಾಯಿತು. ಇವರ ಕಾವ್ಯಶಕ್ತಿಯೂ ಸಾಮಾನ್ಯವಲ್ಲ. ಯಕ್ಷಗಾನ ಪ್ರಬಂಧಗಳೆಲ್ಲ ಇವರಿಗೆ ಕಂಠಗತವಾಗಿದ್ದುವು. ಯಕ್ಷಗಾನದ ವಿಷಯವಾಗಿ ಇವರೊಂದು ಉದ್ಗ್ರಂಥ ಬರೆಯಲು ಹೊರಟಿದ್ದು, ಇನ್ನೂ ಪ್ರಸ್ತಾವನೆಯನ್ನೆ ಮುಗಿಸಿದ್ದಿಲ್ಲವಂತೆ. ಚಿಕ್ಕ ಚಿಕ್ಕ ಕವಿತೆಗಳನ್ನಿವರು ರಚಿಸಿ ತನ್ನ ವಿಶಾಲವಾದ ಮಾನಸಪಟಲದಲ್ಲೆ ಚಿತ್ರಿಸಿ

ಇಟ್ಟಿದ್ದು, ಸರ್ವ ಹಕ್ಕುಗಳನ್ನೂ ದೇವರಿಗೇ ಅರ್ಪಿಸಿ, ಆತನ ಪ್ರೇರಣೆಯಾ ವರೆ ಒಂದು ದಿನ ಜಗತ್ತಿಗೆ ಅವುಗಳ ಅಮೃತವನ್ನು ಕುಡಿಸುವೆನೆಂದು ತನ್ನ ಸ್ನೇಹಿತರೊಡನೆ ಗುಟ್ಟಾಗಿ ತಿಳಿಸಿದ್ದರು. ಇವರೀಗ ತನ್ನ ತುಟಿ ಗಳನ್ನು ಬಿರಿದು, ತೂಕ ಮಾಡಿಕೊಟ್ಟಂತೆ ಐದಾರು ಚೊಕ್ಕ ಶಬ್ದಗಳನ್ನೂ ದಿವರು:—"ಹರಿಜನ ಬಾಲಿಕೆಯನ್ನು ಯಾರಾದರೊಬ್ಬರಿಗೆ ಮದುವೆ ಮಾಡಿಸಬೇಕು" ಎಂದು.

ಮಂಡಲಿಯಲ್ಲಿದ್ದವರೆಲ್ಲರ ಶ್ವಾಸಕೋಶಗಳೊಮ್ಮೆ ಫಕ್ಕನೆ ನಿಂತು ಬಿಟ್ಟವು. "ಹರಿಜನ ಬಾಲಿಕೆಯ ಮದುವೆ?—!"

ಬಿಂಕಯ್ಯ ರೈ ಯಾನೆ ಓಮಾರ ಖಯ್ಯಾಮರು ಒಂದು ನಿಮಿಷ ಕಣ್ಮುಚ್ಚಿ, ಪುನಃ ತೆರೆದು, "ಆದರೆ, ನಮ್ಮವರಲ್ಲಾರೂ ಬ್ರಹ್ಮಚಾರಿಗಳಿಲ್ಲ" ಎಂದರು. ಎಲ್ಲರಿಗೂ ಪುನಃ ಉಸಿರುಬಂತು. ತಮ್ಮ ತಾಯ್ತಂದೆಗಳು ತಮಗೆ ಬಾಲ್ಯದಲ್ಲೆ ವಿವಾಹ ಮಾಡಿಸಿದುದರ ಸುಫಲವನ್ನು ಹರಿಜನ ಕಮಿಟಿಯ ಮೆಂಬರರಾಗಿ ಉಂಡೆವೆಂದು ಆನಂದಪಟ್ಟು, ತಾಯ್ತಂದೆ ಗಳನ್ನೂ, ಹೆಣ್ಣುಕೊಟ್ಟ ಮಾವನನ್ನೂ, ಹೆಂಡತಿಯಾಗಲೊಪ್ಪಿ ಈ ತನಕವೂ ಮನೆಬಿಟ್ಟು ಓಡದ ಮಡದಿಯನ್ನೂ ಮನಸಾ ವಂದಿಸಿದರು.

ಸುದಾಮ ಪ್ರಭುಗಳು ಮಾತ್ರ ಕಣ್ಣರಳಿಸಿದರು. ಇವರು ಅಖಂಡ ಬ್ರಹ್ಮಚಾರಿ. ವಿವಾಹವಾಗೆಂದು ಮನೆಯಜ್ಜಿ, ಆಫೀಸಿನ ಯಜಮಾನ, ಅಂಗಡಿಯ ಗುಂಡೂ, ಎಲ್ಲಕ್ಕಿಂತಲೂ ಮೇಲಾಗಿ ತನ್ನ ಹೃದಯ, ಇವರಿಷ್ಟು ಮಂದಿ ಆಗಾಗ್ಗೆ ಹೇಳುತ್ತಿದ್ದರೂ 'ಇಲ್ಲ'ವೆಂದೇ ಹಟದಿಂದ ನುಡಿದು,— 'ಲಿಲ್ಲಿ' ಹೂವಿನಂತಹ ಓರ್ವ ಗೃಹಿಣಿ, ಆಕೆಯ ಸುತ್ತಲೂ ಐವರು ಮಕ್ಕಳು, ಇವರ ಮುಂದೆ 'ಅಪ್ಪ'ನೆನ್ನಿಸಿಕೊಳ್ಳುತ್ತ ನಿಂತ ತಾನು, ಈ ಚಿತ್ರವನ್ನು ನೆನೆದೇ ಬ್ರಹ್ಮಚರ್ಯವನ್ನು ಕಾಪಾಡಿಕೊಂಡು ಬಂದವರು. ಬಿಂಕಯ್ಯ ರೈಗಳ ಮಾತು ಇವರಿಗೆ ಬಲು ಅಸಹ್ಯವೆನಿಸಿತು. ಹರಿಜನ ಬಾಲಿಕೆಯಂತೆ! ಲಿಲ್ಲಿ ಹೂ........!

ಸುದಾಮ ಪ್ರಭುಗಳು ಬಿಂಕಯ್ಯ ರೈಗಳವರ ದೃಷ್ಟಿಯಿಂದ ತಪ್ಪಿಸಿ ಕೊಳ್ಳಲು ತಲೆ ಬಗ್ಗಿಸಿ, ಸೊಂಟವನ್ನು ಮೇಜಿನಡಿಗೆಳೆದುಕೊಂಡು ಹಾವಿ ನಂತೆ ಸರಿದು ಹೋಗಿ, ಮೇಜಿನ ಮೇಲಕ್ಕೆ ತಮ್ಮ ಟೊಪ್ಪಿ ಮಾತ್ರ ಕಾಣು

ವಂತೆ ಮಹಾ ಸಂಕಟದ ಆಸನದಲ್ಲಿ ರಕ್ಷಣೆ ಹೊಂದಿದರು. ಹರಿಜನ ಸೇವಾ ಸಂಘದ ಕಾರ್ಯಕಾರಿಮಂಡಲಿಯ ಸದಸ್ಯರಾಗುವುದೆಂದರೆ ಹೀಗೂ ಉಂಟೇ?—ಎಂದೂ ಉಸಿರೆತ್ತದೆ ಅಲ್ಲೇ ಮರುಗಿದರು.

“ನನ್ನ ಸೂಚನೆಯನ್ನು ನೀವು ಮಾನಿಸಬಹುದೆಂಬ ಭರವಸೆ ದೊರೆವುದಾದರೆ”—ಬಿಂಕಯ್ಯ ರೈಗಳ ಮಾತುಗಳಿವು—“ಆ ಕೊಂಗ್ರೆಸ್ ವಾಲಂಟೀಯರ್ ಶ್ಯಾಮ ಇದ್ದಾನಲ್ಲ, ಶಾಮಶೆಟ್ಟಿ, ಆತನಿಗೆ ಒಂದು ಮದುವೆ ಮಾಡಿ ಬಿಡಬಹುದು.”

ಕೇಳವವರಾರು? ಎಲ್ಲರಿಗೂ ಆನಂದವೇ. ಸುದಾಮ ಪ್ರಭುಗಳೂ ಹಾವಿನಂತೆಯೇ ಮೇಲಕ್ಕೆ ಸಿಡಿದೆದ್ದು ಕೂತರು. “ಶಾಮ, ಶಾಮ” ಎಂದು ಎಲ್ಲರೂ ಉತ್ಸಾಹದಿಂದ ಆ ಹೆಸರನ್ನು ಉಚ್ಚರಿಸಿದರು.

ಬಿಂಕಯ್ಯ ರೈಯವರೆಂದರು: “ಅಹುದು ಶಾಮ, ಮಹಾ ಕೊಂಗ್ರೆಸ್ ಭಕ್ತ. ಮೂರು ಬಾರಿ, ಪೋಲೀಸರು ತಮ್ಮಿಷ್ಟಕ್ಕೆ ಲಾತಿ ಬೀಸುತ್ತಿದ್ದಲ್ಲಿ ಈತನು ತಾನಾಗಿ ಹೋಗಿ, ಆ ಲಾತಿಯು ಎಲ್ಲಿ ಕಸುವಿನಿಂದ ಹಾರಿ ಬರುತ್ತಿದೆಯೋ ಅಲ್ಲಿಯೇ ನೋಟವಿಟ್ಟು ತನ್ನ ತಲೆಕೊಟ್ಟು ದೇಶಭಕ್ತಿಯನ್ನು ಪ್ರದರ್ಶಿಸಿರುವನು. ಎರಡು ಬಾರಿ ಇವನನ್ನು ಆರಾರು ತಿಂಗಳ ವಾಯಿದೆಯಲ್ಲಿ ಜೈಲಿಗಟ್ಟಿದ್ದರು. ಅಲ್ಲಿ ಅನ್ನದ ಮಡಕೆಗೆ ತನ್ನನ್ನು ಯಜಮಾನಸನ್ನಾಗಿ ಮಾಡಬೇಕೆಂದು ಆಗ್ರಹ ತೊಟ್ಟು, ಅನ್ನ ಬಿಟ್ಟು, ಆತ್ಮ ಬಲಿಯರ್ಪಿಸಲಿದ್ದವನನ್ನು ಹೆಣ ನೋಡಲಾರೆವೆಂಬ ಕರುಣೆಯು ಕರುಳಿಂದ ಹೊರಗೆ ದೂಡಲು, ವಾಯಿದೆಗೆ ಮುಂಚಿತವಾಗಿಯೆ, ರೈಲು ಟಿಕೇಟಿಲ್ಲದೆ ಊರು ಸೇರಿ, ಈಗ ವಾರಕ್ಕೊಮ್ಮೆ ಪ್ರಭಾತಕಾಲದಲ್ಲಿ ಕೆಲವು ಮಕ್ಕಳನ್ನು ಕೂಡಿಕೊಂಡು ರಸ್ತೆಗಳಲ್ಲಿ ‘ಫೇರಿ’ ಹೊಡೆದು, ನಿದ್ರಾಲಸ್ಯದಿಂದ ಕಣ್ಣು ಬಿಡಲಾರದ ಮುದಿಸಿದ ಲಲನೆಯರ ಶಾಪಕ್ಕೊಳಗಾಗಿದ್ದಾನೆ.”

ಬಿಂಕಯ್ಯ ರೈ ಯಾನೆ ಓಮಾರಖಯ್ಯಾಮರವರ ಸೂಚನೆಯು ಸರ್ವಾನುಮತದಿಂದ ಮಂಜೂರಾಯಿತು.

* * * * *

ಸತ್ಯಾಗ್ರಹಿ ಶಾಮನು ಶ್ರೀನಿವಾಸ ಪ್ರಭುಗಳವರ ಅಂಗಡಿಯದೊಂದು ಮೂಲೆಯಲ್ಲಿ ಕುಳಿತು, ‘ಬೆರ್ಸ್’ ಎಂಬ ಕರಡಿ ಹೆಸರಿನ

ಸಿಗರೇಟು ಸೇದುತ್ತ, ಸ್ವದೇಶೀ—ವಿದೇಶೀಗಳ ತತ್ವವನ್ನು ವಿವರಿಸೆಂಬ ವಿನಂತಿಯನ್ನು ಹೊಗೆಯ ಮೂಲಕ ಪರಮಾತ್ಮನಿಗೆ ಓಲೆ ಬರೆದು ಕಳಿಸುತ್ತಿದ್ದನು. ಹೀಗೆ ಧ್ಯಾನಮಗ್ನನಾಗಿ ಕುಳಿತಿದ್ದಾಗ "ಶಾಮು!" ಎಂದು ಒಂದು ಸ್ವರವು ಆತನ ಕಿವಿಗೆ ಬಿತ್ತು. ಶಾಮುನು ಗಾಬರಿಯಿಂದ ಎಚ್ಚೆತ್ತು, ಕೇವಲ ಅರ್ಧ ಮಾತ್ರ ಸುಟ್ಟ 'ಕರಡಿ'ಯನ್ನು ಹೊರಗೆ ಬಿಸುಡ ಲಾರದೆ, ಬೆಂಕಿಸಹಿತ ತನ್ನ ಚಲ್ಲಣದ ಕಿಸೆಗೆ ತುರುಕಿ, "ಹ್ಞಾ—ಅಹುದು" ಎನ್ನುತ್ತ ಕಣ್ಣರಳಿಸಿದನು. ಬಂದವರು ದೊಡ್ಡ ಮನುಷ್ಯರು—ಬಿಂಕಯ್ಯ ರೈ.

"ಶಾಮು, ಇತ್ತ ಬಾ!" ಎಂದರು ರೈಯವರು.

ಶಾಮುನು ಕೆಳಕ್ಕೆ ದುಮುಕಿ, "ಏನು?" ಎನ್ನುತ್ತ, ಬದ್ಧಾಂಜಲಿಯಾಗಿ ನಿಂತನು.

ರೈಯವರು ಮೆಲ್ಲನೆ, ತಮ್ಮ ಅಲಂಕೃತ ಶಬ್ದಗಳನ್ನು ಹೂಗಳಂತೆ ಬಿಸುಡಿದರು: "ಶಾಮು, ನೀನು ಜೈಲಿನಿಂದ ಬಂದು ಐದು ತಿಂಗಳಾಯಿತು".

"ಐದು ತಿಂಗಳು, ಏಳು ದಿವಸ."

"ಸರಿ. ನಾವು ಹರಿಜನಸೇವಾ ಸಂಘವನ್ನು ಮಾಡಿ ಮೂರು ತಿಂಗಳಾಯಿತು."

"ನಿಜ ಸ್ವಾಮಿ."

"ನೀನು ಜೈಲಿನಿಂದ ಬಂದಂದಿನಿಂದ, ಬಂದ ಹಾಗೇ ಇರುತ್ತೀ."

ಈ ಮಾತಿನ ಕ್ರಮವೇನು, ಇದೆಲ್ಲಿಗೆ ನಡೆಯುತ್ತಿದೆ ಎಂಬುವನ್ನು ತಿಳಿಯಲಾರದೆ ಆಶ್ಚರ್ಯಪಡುತ್ತ ಶಾಮುನು, "ಅಹುದು" ಎಂದನು.

"ನಮ್ಮ ಸಂಘವೂ ಆರಂಭಿಸಿದಲ್ಲೇ ಇದೆ" ಎಂದರು ರೈಯವರು.

"ಪಂಚಮರ ಶಾಲೆಯಲ್ಲಿ" ಎಂದು ಕೂಡಿಸಿದನು ಶಾಮು.

"ಸ್ಥಳವಲ್ಲ,—ಸೇವಾಸಂಘದ ಕಾರ್ಯಗಳೇನೂ ನಡೆದಿಲ್ಲವೆಂಬರ್ಥ. ಈಗ, ನೋಡು ಶಾಮು, ಹಿಂದೆ ಮೂರು ಬಾರಿ ಲಾಠಿಗೆ ತಲೆಯೊಡ್ಡಿದವನು ನೀನು!"

"ಅಹುದು ಸ್ವಾಮಿ, ಮೂರೇ ಬಾರಿ." (ಮೂರು ಬಾರಿ ಮಾತ್ರ

ಲಾಠಿಗೆ ತಲೆಕೊಟ್ಟುದು ತನ್ನ ದೇಶ ಭಕ್ತಿಯ ಇಯತ್ತೆಗೊಂದು ವಿಶೇಷ ಗೌರವವಲ್ಲವೆಂಬರ್ಥ ಅದರಲ್ಲಿತ್ತು.)

"ನಿನ್ನ ತಲೆಯ ನರಗಳೆಲ್ಲ ಆ ಮೂರು ಬಾರಿಯೊಳಗೆ ಹುಡಿಯಾಗಿರ ಬೇಕು. ಇನ್ನು ನಾಲ್ಕನೆ ಬಾರಿಗೆ ತಲೆಕೊಡುವೆನೆಂದರೆ ಆ ತಲೆಯಲ್ಲಿ ಒಂದೇ ಒಂದು ತೊಲೆ ನರಗಳಿರಲಾರವು."

"ನನಗೆ ಆಗಾಗ ತಲೆ ತಿರುಗುವುದಿದೆ ಸ್ವಾಮೀ! ರಸ್ತೆಯಲ್ಲಾದರೆ ನಾನು ಲಾಟಾನುಕಂಭಗಳಿಗೆ ಹಿಡಿದು, ಐದು ನಿಮಿಷ ಕಣ್ಮುಚ್ಚಿ ನಿಂತು, ಮುಂದರಿಯುತಿದ್ದೇನೆ. ನೀವು ಹೇಳಿದ್ದೆ ಆಗಿರಬೇಕು,—ನರಗಳೆಲ್ಲ ನಿರ್ಜೀವ."

ಇನ್ನು ನಾಲ್ಕನೆ ಬಾರಿಗೂ ಲಾಠಿಯೊಡನೆ ಸರಸವಾಡಲು ಹೋಗುವಿ ಯಾದರೆ, ಮಿದುಳು ಒಳಗಿಂದೊಳಗೆ ಸ್ಥಾನಭ್ರಷ್ಟವಾಗಿ, ನೀನು ಹುಚ್ಚ ಕೋಟಿ ಆಳ್ವನಂತೆ ತಿರುಗಿ, ಹುಚ್ಚುತನದಲ್ಲಿಯೂ ಲಾಠಿಯ ನೆನಪು ಹುಟ್ಟಿ ನಿನ್ನ ತಲೆಯನ್ನು ಪೋಲೀಸ್ ಸುಪರಿಂಟೆಂಡೆಂಟರ ಬಂಗಲೆಯ ಗೇಟಿಗೆ ಬಡೆದೋ ಕಲೆಕ್ಟರರ ಮೋಟಾರಿನಡಿಗೆ ಇಟ್ಟೋ ಪ್ರಾಣ ಬಿಡುವುದು ಖಂಡಿತ!"

ಭಯಂಕರ! ಬೊಂಬಾಯಿಯ ಬಾಬು ಗಣುವಿನಂತೆ ಸತ್ಯಾಗ್ರಹ ಮಾಡಿ ಮೋಟಾರಿನಡಿಗೆ ಬಿದ್ದು ಸತ್ತರೆ, ಅದೇ ಆತ್ಮಬಲಿಯೆನಿಸುವದು; ಕೀರ್ತಿಯಿದೆ. ಹೆಂಗುಸರು ಆ ಸ್ಥಳದಲ್ಲಿ ದೀಪವಿಟ್ಟು, ಹೂ ಹಾಕಿ, ಹಾಡಿ, ನಲಿಯುವರು. ಆದರೆ, ಹುಚ್ಚನಾಗಿ ಆತ್ಮಹತ್ಯೆ ಮಾಡಿಕೊಂಡರೆ ಯಾವ ಪುರುಷಾರ್ಥ? ಗಂಡುಸರು ಕೂಡ ಆ ರಸ್ತೆಯಿಂದ ಸಾಯಂಕಾಲದ ನಂತರ ಹಾದು ಹೋಗುವುದಿದೆಯೆ? ಇನ್ನು, ಸತ್ಯಾಗ್ರಹಿಗಳು ಸ್ವರ್ಗಕ್ಕೆ ಹೋಗುವರಾದರೂ, ಹುಚ್ಚರಾಗಿ ಆತ್ಮಹತ್ಯೆ ಮಾಡಿಕೊಂಡು ಸತ್ತವರು ಅಲ್ಲಿಗೆ ಮುಟ್ಟುವರೋ ಇಲ್ಲವೋ ಎಂದು ಸಂದೇಹ!—ಶಾಮನು ಚಿಂತಾ ಕ್ರಾಂತನಾಗಿ, ತಲೆಯೆತ್ತಿ, ಪರಿಹಾರವೇನೆಂಬ ಅರ್ಥದಲ್ಲಿ ರೈಯವರನ್ನು ನೋಡಿದನು.

ಭೀತಿ—ಶೋಕಗಳಿಂದ ಪರಿಪೂರ್ಣವಾಗಿದ್ದ ಆ ನಯನಗಳನ್ನು ನೋಡುತ್ತ ಖಯಾಮ ಯಾನೆ ರೈಯವರು ಹೇಳಿದರು:—"ಶಾಮು, ನಿನಗೆ

ದೇಶಸೇವೆಯ ಆಸೆಯಿರುವುದೆಂದು ನಾನು ಬಲ್ಲೆ. ದೇಶಪ್ರೇಮವನ್ನು ತಡೆಯಲಾರದೆ ನೀನೊಂದು ದಿನ ಆತ್ಮ ಬಲಿಯರ್ಪಿಸದೆ ಬಿಡಲಾರೆಯೆಂದೂ ನನಗೆ ಖಚಿತವಿದೆ.''

ಶಾಮನ ಮುಖವು, ಈ ಪ್ರಶಂಸೆಯಿಂದ ಅರಳಿತು. ''ಏನೋ, ಈ ಸೇವಕನ ಅಲ್ಪ ಸೇವೆ; ಭಾರತಾಂಬೆಯ ವೇದಿಕೆಯಲ್ಲಿ'' ಎಂದು ಗೊಣ ಗುಟ್ಟಿದನು.

ಒಂದು ನಿಮಿಷ ಆಲೋಚಿಸುತ್ತ, ಎಂದರು ರೈಯವರು:—''ದೇಶ ಸೇವೆಗೆ ನೂರಾರು ಮಾರ್ಗಗಳಿವೆ. ಅವುಗಳಲ್ಲೊಂದು ಹರಿಜನೋದ್ಧಾರ!''

ಅಹುದೆಂದನು ಶಾಮು.

ರೈಯವರು ಮುಂದರಿಸಿದರು: ''ಹರಿಜನರೆಂದರೆ ನಮ್ಮ ತಮ್ಮಂದಿರೇ—ಖಾಸಾ—ಎಂದೇ ತಿಳಿಯಬೇಕು. ದನ ಕಪ್ಪಾದರೆ ಹಾಲು ಕಪ್ಪೇ ಎಂಬುದೇ ತತ್ವ. ಬಾಣೆಹಣ್ಣು ಡೊಂಕಾದರೆ ಸವಿ ಡೊಂಕಲ್ಲ. ಕಸ್ತೂರಿಯು ಕಪ್ಪಾಗಿರಬಹುದು. ನದಿಯು ಓರೆಕೋರೆಯಾಗಿರಬಹುದು. ಪಂಡಿತನು ಕುರೂಪಿಯಾಗಿರಬಹುದು. ಶಾಮಾ! ಈಗ ನೀನೂ ಕಪ್ಪಲ್ಲವೇ? ನಾನಲ್ಲವೇ? ಹೊಲೆಯರು ಕಪ್ಪಾದರೇನು, ಅವರು ನಮ್ಮ ಬಂಧುಗಳಲ್ಲವೇ? ನಾಯಿಯನ್ನು ಕುರ್ಚಿಯ ಮೇಲೆ ಕುಳ್ಳಿರಿಸುವ ನಾವು ಹೊಲೆಯರನ್ನು ಮುಟ್ಟಲೂ ಬಾರದೇ? ನಮಗೆ ಹೃದಯವೇ ಇಲ್ಲವೇ? ದೇವರ ಪ್ರೀತಿಯ ಮಕ್ಕಳಾದ ಅವರನ್ನು ಕಂಡು ನಾವು ಅಸಹ್ಯಪಡಬಹುದೇ? ನಮ್ಮದೃಷ್ಟಿ ಮಿದುಳಿರುವ ಅವರನ್ನು ನಾವು ಮದದಿಂದ ಅತ್ತ ತಳ್ಳಬೇಕೇ?...............''

ಶಾಮನು ಶಿಲಾಪ್ರತಿಮೆಯಂತಾಗಿದ್ದನು. ರೈಯವರು ಇಂದೇಕೆ ಆಕಸ್ಮಿಕವಾಗಿ ತಮ್ಮನ್ನು ತಾವೇ ಬೈದುಕೊಳ್ಳಲಾರಂಭಿಸಿದರೆಂದೂ ತನ್ನನ್ನೂ ಅವರಲ್ಲಿ ಸೇರಿಸಿದರೆಂದೂ ಅವನ ದುರ್ಬಲ ಮಿದುಳಿಗೆ ಅರ್ಥವಾಗಲಿಲ್ಲ. ಹೇಗಿದ್ದರೂ,—ರೈಯವರು ಕಾರಣವಿಲ್ಲದೆ ಅಷ್ಟು ಮಾತುಗಳನ್ನಾಡುವವರಲ್ಲ. ರೈಯವರ ಧಾಟಿಯಲ್ಲಿ ಪಶ್ಚಾತ್ತಾಪಾನುಭವದ ರಸವಿದೆ. ಶಾಮನೂ ಸ್ವಲ್ಪ ಕುಡಿದು, ಮುಂದೆ ಅಪ್ಪಣೆಯೇನೆಂದು ಕೈ ಜೋಡಿಸಿ ನಿರೀಕ್ಷಣೆಯಲ್ಲಿ ನಿಂತನು.

ರೈಯುವರು ತಮ್ಮ ಭಾಷಣವನ್ನು ಮುಕ್ತಾಯಗೊಳಿಸುತ್ತ ಹೇಳಿದರು: "ಮಿತ್ರಾ, ಶಾಮಾ, ಮಿತ್ರಾ..........!"

ಶಾಮುನು--(ರೈಯುವರ ಮಿತ್ರ!)— ಮತ್ತಷ್ಟು ಉಬ್ಬಿದನು.

"........ಮಿತ್ರಾ, ನೀನೇ ಈ ಕಾಲದಲ್ಲಿ ಮುಂದೆ ಬಂದು, **ನಮ್ಮೂರಿನವರಿಗೆಲ್ಲ ಆದರ್ಶ**ನಾಗಬೇಕು. **ಇಡೀ ಊರಿನಲ್ಲಿ ನೀನೊಬ್ಬನೇ ಎನಿಸಬೇಕು.** ಈ ಊರಲ್ಲಿರುವ "ಮಾತರಂ"ಗಳು ಇನ್ನೂರು ಎಂದು ಲೆಕ್ಕ; ಅವರಲ್ಲಿ ನೀನು "ಒಂದೇ". ಉಳಿದ ನೂರತೊಂಭತ್ತೊಂಭತ್ತು ಮಂದಿ ನಿಷ್ಪ್ರಯೋಜಕರು. ನಾನು ಮೊದಲೇ ನಿಶ್ಚಯಿಸಿಟ್ಟಿದ್ದೇನೆ— "ಗುರ್ವೇದಿ" ಎಂದು ಆಕೆಯ ಹೆಸರು— ಹರಿಜನ ಬಾಲಿಕೆ,—ನೀನೇ ಆಕೆಯನ್ನು ವಿವಾಹವಾದರೆ ನಿನ್ನ ಏಳು ಕುಲಗಳು ಉದ್ಧಾರ!"

ಶಾಮುನಿಗೆ ತಿಳಿಯಿತು. 'ಗಂಡಾಂತರ'ವೆಂದು ಹಿಂದೆ ಆತನು ಎಲ್ಲೆಲ್ಲಿಯೋ ಓದಿದ ಶಬ್ದದ ಅರ್ಥವು ಈಗ ಒಂದಿಷ್ಟು ಹೊಳೆದಂತಿದೆ. ಆದರೂ ಊರಿಗೆಲ್ಲ ಇವನೇ ಆದರ್ಶನಲ್ಲವೇ?—"ಹಂ! 'ಗುರ್ವೇದಿ' ಎಂದೇ ಹೆಸರೇ?" ಎಂದನು.

ಗುರ್ವೇದಿ ಎಂಬುದರಲ್ಲಿ ಆತನಿಗೇನೋ ಎಂದು ಅಲ್ಪತನ ತೋರಿತು. 'ಗುರುವೇಣಿ' ಎಂದಿರಬಹುದಿತ್ತು; 'ಗುರುಬಾಲೆ' ಎಂದರೆ ಬಂಗಾಳೀ ವಾಸನೆ ಬೀರಿ ಸೊಬಗೆನಿಸುತಿತ್ತು; 'ಗುರುವೇಲು' ಎಂದರೆ ತಮಿಳೋ ತೆಲುಗೋ ಆಗುತ್ತ, ಅದಕ್ಕೂ ಒಂದು ಸ್ಥಾನವಿರಬಹುದಿತ್ತು. 'ಗು' ಎಂಬುದರಿಂದಲೇ ಅದು ಆರಂಭವಾಗಬೇಕಾದುದಾವಶ್ಯಕವಾದರೆ ಆ ಮೇಲಿನವುಗಳಲ್ಲಾವುದಾದರೂ ಆಗಬಹುದಾಗಿತ್ತು. ಬರೇ 'ಗುರ್ವೇದಿ' ಎಂಬುದರಲ್ಲಿ ಸ್ವಾರಸ್ಯವೇನೂ ತೋರಲಿಲ್ಲ.

ಖಯ್ಯಾಮರೇ ಆತನ ಸಹಾಯಕ್ಕೆ ಬಂದರು. "ಅಹುದು, 'ಗುರ್ವೇದಿ.' ಕಪ್ಪೆಂದು ತಿರಸ್ಕರಿಸಬೇಡ. ಮೊದಲೇ ಹೇಳಿರುತ್ತೇನೆ— ಕಸ್ತೂರಿ ಕಪ್ಪೆಂದು. ಶಂತನುವು, ಹಿಂದೆ, ಮೊಗೇರ ಸ್ತ್ರೀಯಾದರೂ ಯೋಜನಗಂಧಿಯೆನ್ನುತ್ತ ಸತ್ಯವತಿಯನ್ನು ಮದುವೆಯಾದನು."

ನಿಜ! ಆದರೆ, ಗುರ್ವೇದಿಯು ಕಡೆಯಿಂದ ಯೋಜನದಲ್ಲವಾದರೂ ಅರ್ಧ ಮೈಲಿಯಷ್ಟಾದರೂ ಗಂಧದ ಶುಭವಾರ್ತೆಯಿರಬೇಡವೇ? ಸತ್ಯ

ವತಿಯ ಹೆಸರು ಮನೋಹರ; ಗಂಧವು ಮನೋಹರ; ಮೇಲಾಗಿ, ಆಕೆಯಲ್ಲಿ ಮನಸೋತುದು ಶುದ್ಧ ಮನೋಹರ. ಹೀಗಾಗಿ ಶಂತನುವಿಗೆ ಸಮಾಧಾನ. ಗುರ್ವೇದಿಯ ಪಾಲಿಗೆ ಇದೆಲ್ಲ ಮನೋಹರತೆಯ ಗುಣ ಗಣವೆಲ್ಲಿ? ಹೆಸರಿಲ್ಲ; ಗಂಧವಿಲ್ಲ; ಬಣ್ಣವಿಲ್ಲ; ಇನ್ನು,—ಲಾತಿ ಪೆಟ್ಟಿನಿಂದ ಚೂರಾದ ತಲೆಯಲ್ಲಿನ ಮಿದುಳು 'ಮನಸೋಲಿ'ನ ಅನುಭವ ಕೊಡುವ ಲಕ್ಷಣವಿದೆಯೇ?—ಆದರೂ,—**ಊರಿನೊಳಗಿನ ಇನ್ನೂರು 'ಮಾತರಂ'ಗಳಲ್ಲಿ ಶಾಮನು 'ಒಂದೇ!' ಊರಿನಲ್ಲಿ ಏಕಮಾತ್ರ ಆದರ್ಶನು ಇವನೇ!**

"ಅಹುದು, ಕಸ್ತೂರಿಯು ಕಪ್ಪು ಸ್ವಾಮಿ; ತೊಲೆಗೆ ಎಂಭತ್ತು ರೂಪಾಯಿ ತನಕ ಬೆಲೆಯಂತೆ, ಅಲ್ಲವೇ?" ಎಂದು, ಸಮಾಧಾನಚಿತ್ತಕ್ಕಾಗಿ ಯತ್ನಿಸುತ್ತ, ಉಗುಳುನುಂಗಿ, ಹೆಣವು ನಕ್ಕರೆ ಆಗಬಹುದಾದಂಥ ಚರ್ಯೆಯಿಂದ ನಕ್ಕು ನುಡಿದನು.

ಖಯ್ಯಾಮು ರೈಯವರ ಕಾವ್ಯಭಂಡಾರಶಿರವು ಬಾಯಿಯಿಂದ ಅಮೃತಧಾರೆಯನ್ನೆ ಸುರಿಸಿತು: "ಒಳ್ಳೆ ಕಸ್ತೂರಿಗೆ ತೊಲೆಗೆ ನೂರು ರೂಪಾಯಿ ತನಕ ಕ್ರಯವಿದೆ. ನಮ್ಮ ಆಯುರ್ವೇದರತ್ನಗಳ ಅಂಗಡಿಗಳಲ್ಲಿ ಅಂತಹ ಕಸ್ತೂರಿ ಅರ್ಧತೊಲೆಯಾದರೂ ದೊರೆಯದು. ಅವರ ಅಂಗಡಿಯನ್ನೂ 'ಆಯುರ್ವೇದರತ್ನ' ಎಂಬ ಬಿರುದನ್ನೂ ಮಾರಿದರೆ ಕಾಲು ತೊಲೆಯನ್ನು ಕೂಡ ಕೊಂಡುಕೊಳ್ಳುವಷ್ಟು ಹಣ ದೊರೆಯದು. ಮತ್ತು ಶಾಮಾ, ಮಿತ್ರಾ! ಆ ಕಸ್ತೂರಿಯಂತೆಯೇ ಈ ಗುರ್ವೇದಿ ಎಂದು ತಿಳಿ. ಕಸ್ತೂರಿಗೆ ತೊಲೆಗೆ ನೂರು ರೂಪಾಯಿಯಾದರೆ ಗುರ್ವೇದಿಗೆ ತೊಲೆಗೆ ಸಾವಿರವೆಂದೇ ಲೆಕ್ಕ ಹಾಕು. ಹರಿಜನರೆಂದು ಅವರಿಗೆ ಸುಮ್ಮನೆ ಬಿರುದು ಬರಲಿಲ್ಲ. ನಮಗಿಂತಲೂ ಹೆಚ್ಚಾಗಿ ಹರಿಯು ಅವರ ಧಮನಿಗಳಲ್ಲಿ ಹರಿಯುತ್ತಿರುವನು. ಹೆಚ್ಚೇಕೆ, ಸೊಳ್ಳೆಕೂಡ ಅವರ ಮೈಯನ್ನು ಕಡಿಯುವುದಿಲ್ಲವಂತೆ. ಮತ್ತು ಶಾಮಾ, ಬಂಧು! "Down-trodden brother' ಎಂದಾಗಲೇ ಆ ಶಬ್ದದಲ್ಲೊಂದು ದುಃಖವು ಹುದುಗಿದೆ. ನಿನ್ನ ತಮ್ಮನನ್ನು ಕಾಲಡಿಯಲ್ಲಿ ಮೆಟ್ಟಿ ನಿಂತು, ನೀನು 'ಮೈಸೂರ್ ಪಾಕ್' ತಿನ್ನುವುದೆಂದರೆ ನಿನಗೆ ಹೇಗೆನಿಸೀತು? ಬಂಧು! ಆಡಂಬರದ ಕರಿಯ

ಛಾಯೆಯು ನಮ್ಮ ಸತ್ಯಾತ್ಮನನ್ನು ಮುತ್ತಿ ಬಿಟ್ಟದೆ. ಅದನ್ನು ತೆಗೆದು ಹಾಕು. ಈ ಸಮಾಜ ಸುಧಾರಣೆಯಲ್ಲಿ ಮುಂದರಿ. ಹಿಂದೂಗಳು ಸ್ವಾರ್ಥ ತ್ಯಾಗಕ್ಕೂ, ಅನುವು ಬಂದಾಗ ಸ್ವ-ಜನೋದ್ಧಾರಕ್ಕೂ ಎಂದೆಂದೂ ಮುಂದೆ ಎಂಬುದನ್ನು ಜಗತ್ತಿಗೆ ಸಾರು. ಮಿತ್ರಾ, ಕಣ್ತೆರೆ!"

ಒಂದು ಮಾತನ್ನೂ ಬಿಡದೆ "ಎಗ್ಸ್ಯಾಮಿಕ್ಸರಿ"ನಂತೆ ಕುಡಿಯುತಿದ್ದ ಶಾಮನು, ಕೇಳುತಿದ್ದಂತೆ ಕಣ್ಣು ಮುಚ್ಚಿಕೊಂಡಿದ್ದನು. 'ತೆರೆ!' ಎನ್ನು ತ್ತಲೇ ತೆರೆದು, ರೈಯವರನ್ನು ಕರುಣಾರ್ದ್ರದೃಷ್ಟಿಯಿಂದ ನೋಡಿದನು. ವಧಾಸ್ಥಾನಕ್ಕೆ ಒಯ್ಯಲ್ಪಡುವ ಕುರಿಯ ಕಣ್ಣಲ್ಲಿ ಯಾವ ಭಾವವಿರುವುದೋ ಅದೇ ಭಾವವು ಆತನ ಕಣ್ಣಲ್ಲಿ ತೋರುತಿದ್ದಿತು.

ಕಣ್ತೆರೆದ ಶಾಮಶೆಟ್ಟಿಯ ಮುಖ ನೋಡುತ್ತ ಖಯ್ಯಾಮರೆಂದರು: "ಶಾಮಾ, ಮನವರಿಕೆಯಾಯಿತಲ್ಲವೇ? ಬಾ, ಒಂದಿಷ್ಟು ಕಾಫಿ ಕುಡಿಯೋಣ."

ಶಾಮನಿಗೆ ಕಾಫಿಯು ಬೇಕಾದಂತೆ ತೋರಲಿಲ್ಲ. ಅವನ ಹೊಟ್ಟೆಯೆಲ್ಲ ಗುರ್ವೇದಿಯ ಕಲ್ಪಿತರೂಪದಿಂದ ತುಂಬಿಕೊಂಡಿತ್ತು. ಆದರೂ, ಏನೋ ಒಂದು ಆಯಾಸವು ತೋರುತಿದ್ದುದನ್ನು ಶಮನಗೊಳಿಸಲೆಂದೋ, ರೈಯವರ ಮಾತನ್ನು ಮೀರಲಾರದೆಯೋ, ಅವರ ಹಿಂದೆಯೇ ನಡೆದುಹೋದನು.

ಕಾಫಿ ಕುಡಿದೆದ್ದು ಮನೆಗೆ ಹೋಗುವಾಗ ರೈಯವರು ಎಚ್ಚರಿಸಿ ಹೇಳಿದರು—"ಇದೆಲ್ಲ ಈಗ ನಿನ್ನ ಮನಸ್ಸಿನಲ್ಲೆ ಇರಲಿ! ಯಾರಿಗೂ ಹೇಳಬೇಡ!" ಎಂದು.

* * * * *

"ಗುರ್ವೇದಿ—ಯಾರಿಗೂ ಹೇಳಬೇಡ!" ಎಂದು ಒಂದು ಅಪಹಾಸ್ಯ ಸೂಚಕ ಶಬ್ದವು ಕಿವಿಯಲ್ಲೂದಿದಂತಾಗಿ ಮೈ ಝುಮ್ಮೆನಿಸಿ, ಶಾಮನು ಎದ್ದನು. ಅದು ಆತನ "ಮದುವೆಯ ನಿನ್ನೆ." ಅಂದರೆ, ನಾಳೆಯೇ ಗುರ್ವೇದಿಯೊಡನೆ ಲಗ್ನ!

ಲಗ್ನದ ನೆನಪಾಗುತ್ತಲೇ ತಣ್ಣೀರು ಹೊಯ್ದಂತಾಗಿ, ಕಣ್ಣರಳಿಸಿ ಎದ್ದು ಕುಳಿತನು. 'ಗುರ್ವೇದಿ' ಮತ್ತು 'ಯಾರಿಗೂ ಹೇಳಬೇಡ' ಎಂಬ ಶಬ್ದಗಳು ಹಲ್ಲುಮೊರೆದು ಅಣಕಿಸಿದುವು.

ಅಲ್ಲಿ ಗೋಡೆಗೆ ನೇತಾಡುತ್ತಿದ್ದ ಅಂಗಿಯ ಕಡೆಗೆ ದೃಷ್ಟಿಹೋಯಿತು. ಅದರೊಳಗೆ ರೂಪಾಯಿಗಳಿದ್ದುವು—೨೫! ಬಿಂಕಯ್ಯ ರೈಯವರು ಇವನಿಗಾಗಿಯೇ—ಮದುವೆಗಾಗಿ—ವಂತಿಗೆ ಎತ್ತಿದ ಹಣ. ಅಹುದು, ನಾಳೆಯೇ ಮದುವೆ; ಅದರ ವೆಚ್ಚಗಳಿಗೆಂದು ಈ ೨೫ ರೂಪಾಯಿಗಳನ್ನು ಕೊಟ್ಟಿರುವರು.

ಮದುವೆ?—ಅಹುದು, ಗುರ್ವೇದಿಯೊಡನೆ! ಭಯಂಕರ. ಆದರೆ.... **ಈ ಊರಿಗೆ ಆದರ್ಶನು ಶಾಮನೊಬ್ಬನೇ!**

ಮುಖತೊಳೆದು, ವಸ್ತ್ರಗಳನ್ನುಟ್ಟು, ಅಂಗಿಯನ್ನು ಹಾಕಿ ಹೊರಗೆ ಹೊರಟನು. ಬಾಗಲಲ್ಲಿಯೇ ಗುರ್ವೇದಿಯ ಜಾತಿಯ ಬಾಲೆಯ ದರ್ಶನವಾಯಿತು. ಹರಕು ಸೀರೆಯನ್ನುಟ್ಟುಕೊಂಡು, ತಲೆಯ ಮೇಲೆ........ ಬಾನಿಯನ್ನಿರಿಸಿಕೊಂಡಿರುವಳು! ಇನ್ನಿವನು ತಮ್ಮವನಾದನೆಂಬ ಗೌರವ ಸೂಚಕಭಾವದಿಂದಲೋ ಬಂಧುಪ್ರೇಮದಿಂದಲೋ, ಪರಿಚಯವಿದ್ದವಳಂತೆ ತನ್ನನ್ನೆ ನೋಡುತ್ತಿರುವಳೇ?—ಅಲ್ಲ, ಬರೇ ಭ್ರಾಂತಿ! ಗುರ್ವೇದಿಯು ಹೀಗೆಯೇ ಇರಲಾರಳಾದರೂ........**ಆದರೆ, ಈ ಊರಿಗೆ ಆದರ್ಶನು ಶಾಮನೊಬ್ಬನೇ!**

ನಡೆವಾಗ ಕಿಸೆಯೊಳಗಿನ ರೂಪಾಯಿಗಳು ಶಬ್ದಮಾಡುತ್ತಿದ್ದುವು. ಶಬ್ದ?—ಬರೇ ಶಬ್ದವಲ್ಲ, ಸ್ಪಷ್ಟವಾಗಿ ಮಾತಾಡುತ್ತಿವೆ: "ಗುರ್ವೇದಿಯ ಗಂಡ! ಹೊಲೆಯ!" ಎನ್ನುತ್ತಿವೆ. ರೂಪಾಯಿಗಳೂ ಮಾತಾಡುತ್ತಿವೆಯೇ? ........**ಆದರೆ, ಈ ಊರಿಗೆ ಆದರ್ಶನು....!**

ಕರಿಯವರ್ಣ—ಥಳಥಳಿಸುವ ಮೈ—ಕಿವಿಗೆ ಕೈ ಬಳೆಯಾಕಾರದ ಎರಡು ಉಂಗುರಗಳು—ಕಟಿತನಕ ಕರ್ರಗಿನ ವಸ್ತ್ರದ ತುಂಡು—ತಲೆಯ ಮೇಲೊಂದು ಬುಟ್ಟಿ (ಎಂಜಲೆಲೆಯಿದ್ದುದೇ?)—ಮುಖದಲ್ಲಿ ತೃಪ್ತಿಯ(!) ನಗೆ—ಇವಳು ಕೊರಗತಿ! ಗುರ್ವೇದಿಯ ತರಗತಿಗಿಂತ ಹೆಚ್ಚಿನವಳಲ್ಲ. ಗುರ್ವೇದಿಯ ಸ್ನೇಹವಿದ್ದವಳೂ ಆಗಿರಬಹುದು. ಮುಂದೆ ತನ್ನ ಪರಿಚಯ ಮಾಡಿಕೊಳ್ಳುವವಳೇ. **ಆದರೆ, ಈ ಊರಿಗೆ ಆದರ್ಶನೊಬ್ಬನೇ—ಶಾಮು!**

ಗುರ್ವೇದಿಗೆ ತಾಯಿಯಿರಬಹುದು—ಶಾಮುನಿಗೆ ಅತ್ತೆ! ತಂದೆಯಿರಬಹುದು—ಮಾವನೆನ್ನಲೇ ಬೇಕು! ಸಹೋದರರಿರಬಹುದು—ಎಲ್ಲರೂ ಭಾವಂದಿರೇ! ಮಾವನ ಮನೆಗೆ ಹೋದರೂ ಹೋಗದಿದ್ದರೂ ಅವರೆಲ್ಲ

**ಅವರೇ—ಅತ್ತೆ, ಮಾವ ಮತ್ತು ಭಾವಂದಿರು! ಆದರೆ, ಈ ಊರಿಗೆಲ್ಲ ಆದರ್ಶನು ಇವನೇ—ಶಾಮು!**

ಶಾಮುನ "ಪೂರ್ವಾಶ್ರಮ"ದ ಬಂಧುಗಳ ಮಾತು ಇರಲಿ. ನಕ್ಕಾರು, ಕುಚೇಷ್ಟೆ ಮಾಡಿಯಾರು, ಬಹಿಷ್ಕರಿಸಿಯಾರು. **ಆದರೆ, ಊರಿಗೊಬ್ಬ ಆದರ್ಶನು ಶಾಮುನೇ!**

ಆದರೆ........!

ಆದರ್ಶನು! ಹ್ಞ! ವಿಕ್ರಮರಾಯರಿರುವರು–ಹರಿಜನಸೇವಾ ಸಂಘಕ್ಕೆ ಇವರೇ ಅಧ್ಯಕ್ಷರು. ಅವರೇಕೆ ಹರಿಜನ ಬಾಲಿಕೆಯನ್ನು ವಿವಾಹವಾಗರು? —ಸರಿ, ಅವರಿಗೆ ವಿವಾಹವಾಗಿದೆ. ಆದರೆ, ಅವರ ಮಕ್ಕಳು? ಇವರಿಗೆ ಹರಿಜನರೊಂದಿಗೆ ಶರೀರ ಸಂಬಂಧವಾಗಲಿದೆಯೆ?—ಆ ಪ್ರಶ್ನೆಗೆ ಉತ್ತರವು, ಆ ಮಕ್ಕಳು ಬೆಳೆದ ಮೇಲೆಯೇ ತಿಳಿಯಬೇಕು.

ಪಾಂಡುರಂಗರಾಯರು?—ಮೊದಲೇ ವಿವಾಹವಾಗಿದೆ.

ಕೃಷ್ಣನಾಯ್ಕರು?—ಇವರಿಗೂ ಸ್ವಜಾತಿಯ ಹೆಂಡತಿಯಿದೆ.

ಸುದಾಮಪ್ರಭು?—ಇವರು ಆಜನ್ಮ ಬ್ರಹ್ಮಚಾರಿ.

ಲಕ್ಷ್ಮೀನಾರಾಯಣರಾಯರು,<br>ಬಲರಾಮಶೆಟ್ಟಿ ಮೊದಲಾದವರು? } ಇವರಿಗೆಲ್ಲ ವಿವಾಹವಾಗಿದೆ.

ಸರಿ! ಯಾರಿಗೂ ಹರಿಜನ ಬಾಲಿಕೆಯನ್ನು ವಿವಾಹವಾಗುವ ಸುಯೋಗವೊದಗುವ ಸಂಭವವಿಲ್ಲ. **ಆದರ್ಶನು ತಾನೇ,—ಶಾಮು!**

ಆದರ್ಶನು! ಹೊಟ್ಟೆಗಿಲ್ಲದೆ ಅಲೆಯುವ ತಾನು ಆದರ್ಶನು! ನಿತ್ಯ ನಿರುದ್ಯೋಗದ ಪೀಡೆಯಿಂದ ನಶಿಸುತ್ತಿರುವ ತಾನು ಆದರ್ಶನು! ನಾಳೆಯ ಭರವಸೆಯೂ ಇಲ್ಲದ ತಾನು ಆದರ್ಶನು! ಇನ್ನೂ "ಹಾಲಿನ ಹಲ್ಲು" ಉದುರಿಲ್ಲದೆ ನಿರಪರಾಧಿಯಾಗಿರುವ ತಾನು ಆದರ್ಶನು! ವರ್ಣವೆಂದರೇನೆಂದು ತಿಳಿಯದ ತಾನು ಸವರ್ಣ-ಅವರ್ಣಗಳ ಕಾದಾಟದಲ್ಲಿ ಚಟ್ಟಾಗಿ ಆದರ್ಶನು! ಮೇಲ್ ಜಾತಿಯವಳನ್ನಾದರೂ ವಿವಾಹವಾಗಬಹುದೋ ಎಂಬಿಷ್ಟನ್ನಾದರೂ ತಿಳಿವ ಮೊದಲೇ ಹರಿಜನಬಾಲಿಕೆಯನ್ನು ವಿವಾಹವಾಗಿ ಆದರ್ಶನು!........

ಇಲ್ಲ ಇಲ್ಲ! ತಾನು ಆದರ್ಶನಾಗುವುದಿಲ್ಲ! ಗುರ್ವೇದಿಯುನ್ನಾತನು ಸಹಿಸನು! ಇಂದು ಪರಿಗ್ರಹಿಸಿ, ನಾಳೆ ತ್ಯಜಿಸುವ ವಸ್ತುವು ಹೆಂಡತಿಯಲ್ಲ. ಅದರಲ್ಲಂತೂ "ಆದರ್ಶನು" ಹಾಗೆ ಮಾಡಲೇ ಬಾರದು. ಆದರೆ—........

ಹಾಯ್! ಹರಿಜನಸೇವಾ ಸಂಘದ ಪ್ರಕಟಣಾಶಾಖಾಧಿಕಾರಿಯ ಕಾರ್ಯಕ್ಷಮತೆಯು ಅಷ್ಟಿಷ್ಟಲ್ಲ;—ಪತ್ರಿಕೆಗಳಲ್ಲೆಲ್ಲ ಈ "ಆದರ್ಶದ" ಸುದ್ದಿಯು ಮೊದಲೇ ಪ್ರಕಟವಾಗಿದೆ—ನಾಳೆ ಲಗ್ನವೆಂದು! ನಾಳೆ, ಪಂಚಮರ ಶಾಲೆಯಲ್ಲಿ, ತನ್ನ ವಿವಾಹಮಂಟಪದೆದುರು ಹತ್ತು ಸಾವಿರ ಜನರು ಕೂಡಿ "ಗುರ್ವೇದಿ ಹಸ್ಬೆಂಡ್‌ಕೀ ಜೈ!" ಎಂದು, ಹಿಂದೀ-ಇಂಗ್ಲಿಷ ಬೆರೆಸಿ ಜಯಕಾರ ಹಾಕುವುದನ್ನು ತಾನು ಕೇಳಲೇ ಬೇಕು. ಪೋಲೀಸರ ಲಾತಿಯ ಪೆಟ್ಟು ಇನ್ನೆರಡು ತಿಂಗಳಲ್ಲಿ ಮಾಸಬಹುದು. "ಗುರ್ವೇದಿಯ ಗಂಡ" ಎಂಬ ಗಾಯವು ಮಾಸುವುದು ಗೋರಿಯಲ್ಲಿಯೇ!

ಆದರ್ಶ ಶಾಮುನಲ್ಲಿ ಪ್ರತಿಕ್ರಿಯೆಗೆ ಆರಂಭವಾಯಿತು. ರೂಪಾಯಿಯ ಶಬ್ದವು ನಿಮಿಷನಿಮಿಷಕ್ಕೆ ಅಣಕಿಸಿತು. ಆ ರೂಪಾಯಿ, ಅಂಗಿ, ಧೋತರ, ಕೈ, ಕಾಲು, ಆ ಕೋಟೆ, ಈ ತಿಮ್ಮ, ಈ ಮರ, ಆ ಗೋಡೆ, ವಾತಾವರಣ, ಎಲ್ಲವೂ "ಗುರ್ವೇದಿಗಂಡ!" ಎಂದುವು. ಮಿದುಳು ಬಿಸಿಯೇರಿತು. ನೆತ್ತರು ವೇಗವಾಗಿ ಹರಿಯಲಾರಂಭಿಸಿತು. ಕುಣಿಯಲೋ ಓಡಿಹೋಗಲೋ ಪರ್ವತವೇರಿ ಕೆಳಗೆ ಹಾರಲೋ, ತಲೆ ಬಡೆದುಕೊಳ್ಳಲೋ, ಏನೋ ಸ್ವಹಿಂಸೆಯ ಪ್ರೇರಣೆಯೊಂದು ಬಲಾತ್ಕಾರಪಡಿಸಿತು. ನಡುಮಾರ್ಗದಲ್ಲಿ ನಿಂತು, ತಲೆಯನ್ನು ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಂಡನು. ಒಂದೆರಡು ನಿಮಿಷ ನಿಂತು, ಕದಲಿದ ಚಿತ್ತವನ್ನು ಸ್ವಸ್ಥಾನಕ್ಕೆ ತಂದು ನಿಲ್ಲಿಸಿ ಆಲೋಚಿಸಿದನು. ಆ ಮೇಲೆ, ಅಲ್ಲಿಂದ ನೆಟ್ಟಗೆ ಒಂದು ಜವುಳಿ ಅಂಗಡಿಗೆ ನಡೆದುಹೋದನು.

* * * * *

ಪಂಚಮರ ವಸಾಹತಿನಲ್ಲಿ ಕೋಲಾಹಲ. ಸಂಜೆಯ ಸೂರ್ಯನ ರಕ್ತವರ್ಣದ ಬಿಸಿಲು, ಆ ವಸಾಹತಿನಲ್ಲಿ ಓಡಾಡುವ ಕರಿವರ್ಣದ ಮೈಗಳ ಮೇಲೆ ಬಿದ್ದಿರಲು, ನೇರಳೆಯಾಗಿ ಮಾರ್ಪಟ್ಟಿರುವ ಆ ವ್ಯಕ್ತಿಸಮೂಹವು ನೋಡತಕ್ಕ ನೋಟವಾಗಿತ್ತು.

ಶಾಮನು, ಇದುವೇ ಗುರ್ವೇದಿಯ ಮನೆಯ ವಠಾರವೆಂದು ಸುಲಭವಾಗಿ ತಿಳಿದನು. ಅಂಗಳದಲ್ಲಿ ಶಗಣಿ ಸಾರಿಸಿ, ಶುದ್ಧವಾಗಿಟ್ಟಿದ್ದರು. ನೆಲದಿಂದ ಕೇವಲ ಹತ್ತು ಅಡಿಯಷ್ಟಿರುವ ಹುಲ್ಲಿನ ಮಾಡುಗಳ ಚಿಕ್ಕ ಗುಡಿಸಲುಗಳು. ಪೇಟೆಯಲ್ಲಿ ಅವರಿವರು ಹೇಳುತಿದ್ದಂತೆ ಅಷ್ಟೇನೂ ಅಶುಚಿಯಾಗಿ ತೋರಲಿಲ್ಲ. ಗುರ್ವೇದಿಯ ಮದುವೆಯೆಂದು, ಮೇಲ್ ಜಾತಿ ಶಾಮನ ಹೆಸರಲ್ಲಿ ಇಷ್ಟು ಶುಚಿತ್ವವಾಗಿರಬಹುದು.

ಶಾಮನು ಅಲ್ಲಿಗೆ ಬರುತ್ತಲೇ ಎಲ್ಲರೂ ತಟಸ್ಥರಾಗಿ ಈ ಮಹಾನ್ ವ್ಯಕ್ತಿ ಯಾರೆಂದು, ಪ್ರಶ್ನಾಸೂಚಕ ದೃಷ್ಟಿಯಿಂದ ನೋಡಿದರು.

ಉಸಿರನ್ನು ಬಿಗಿಹಿಡಿದು ಶಾಮನು, "ಗುರ್ವೇದಿಯ ಮನೆ?" ಎಂದು ಕೇಳಿದನು.

"ಇದು!" ಎಂದು ಬೆರಳುತೋರಿಸಿದುವು ಹನ್ನೆರಡು ಕೈಗಳು. ಶಾಮನ ಕೈಯಲ್ಲಿ ಕಾಗದದಲ್ಲಿ ಮಡಗಿರುವ ಒಂದು ಗಂಟನ್ನು ನೋಡಿ, "ಮದುಮಗಳಿಗೆ ಉಡುಗೊರೆ—ಸೀರೆ!" ಎಂದು ಐವರು ಪಿಸುಗುಟ್ಟಿದರು. ಶಾಮನು ಇದಾವುದಕ್ಕೂ ಲಕ್ಷ್ಯಗೊಡದೆ, ಗುರ್ವೇದಿಯ ಗುಡಿಸಲನ್ನು ಪ್ರವೇಶಿಸಿದನು.

ಜಗಲಿಯ ಮೇಲೆ ಮೂವರು ಹೆಂಗುಸುರು, ಇಬ್ಬರು ಗಂಡುಸರು. ಮತ್ತು ಐವರು ಮಕ್ಕಳು ಇದ್ದುವು. ಶಾಮನು ಜಗಲಿಹತ್ತುತ್ತಲೇ ಎಲ್ಲರೂ ಎದ್ದುನಿಂತರು. "ಗುರ್ವೇದಿಯ ಮನೆ?" ಎಂದು ಪುನಃ ಪ್ರಶ್ನಿಸಿದನು.

"ಅಹುದೆಂ"ದರು ಗಂಡಸರು. ಇವನು ಮದುಮಗನೆಂದು ಯಾರಿಗೂ ತಿಳಿಯದು.

"ಗುರ್ವೇದಿಯೆಲ್ಲಿ?" ಎನ್ನುತ್ತ, ತನ್ನ ಕೈಯಲ್ಲಿನ ಕಟ್ಟನ್ನು ಕೆಳಗಿರಿಸಿ, ಮುಂದೆ ನಿಂತುಕೊಂಡ ಹತ್ತೆಂಟು ವ್ಯಕ್ತಿಗಳನ್ನೂ ನೋಡಿದನು.

"ನಾನು ಕರೆಯುತ್ತೇನೆ" ಎನ್ನುತ್ತ ಮೂವರು ಹೆಂಗಸರೂ ಇಬ್ಬರು ಗಂಡುಸರೂ ನಾಲ್ವರು ಮಕ್ಕಳೂ ಒಬ್ಬರ ಹಿಂದೆ ಒಬ್ಬರು ಒಳಗಿನ ಕೋಣೆಗೆ ಹೋದರು. ಸುಮಾರು ಮೂರು ವಯಸ್ಸಿನ ಚಿಕ್ಕ ಕರಿಯ ತಮ್ಮನು ಮಾತ್ರ ಬತ್ತಲೆಯಾಗಿ ಅಲ್ಲೆ ಕುಳಿತು, ಈ ಹೊಸ ವ್ಯಕ್ತಿ ಯಾರೆಂದು ಶಾಮನನ್ನೆ ನೋಡುತಿದ್ದನು.

"ಇವನು ನನ್ನ ಭಾವನಾಗಿರಬೇಕು!" ಎಂದೆಣಿಸಿ ಶಾಮನು, ಮಹಾ ದುಃಖದಿಂದ ಆ ಮಗುವಿನೊಡನೆ "ನಿನ್ನ ಹೆಸರೇನು?" ಎಂದು ಕೇಳಿದನು. ಮಗುವು ಕಂಗಾಲಾಗಿ ಒಳಗೆ ಓಡಿಹೋಯಿತು. **"ಆದರ್ಶನು ಈ ಊರಿಗೆ ನಾನೊಬ್ಬನೇ!"** ಎಂದುಕೊಂಡನು ಶಾಮ.

ಒಳಗೆ ಹೆಂಗುಸರ ಪಿಸುಮಾತು ಹೆಚ್ಚಿತು. ಭಾವೀ ಪತ್ನಿಯನ್ನು ಈಗಲೀಗ ಕಾಣುವೆನೆಂಬ ತವಕದಿಂದ ಶಾಮನಿಗೆ ಎದೆಗುಂಡಿಗೆಯು ಪರಿಮಿತಿ ಮೀರಿ ಬಡಿದುಕೊಂಡಿತು. "ಭಗವಂತ! **ಈ ಊರಿಗೆ ಆದರ್ಶನು ನಾನೇ;** ನನ್ನನ್ನು ಕಾಯುವವನು ನೀನೇ!" ಎಂದು ಕೊಂಡನು ಶಾಮ.

ಅಷ್ಟರಲ್ಲಿ 'ಝಲ್‌ಝಲ್' ಎಂಬ ಶಬ್ದವೊಂದು ಕೇಳಿಸಿತು. ಶಾಮನು ಕಣ್ತೆರೆದನು. ಎದುರಲ್ಲಿ ಕರಿಯ ವ್ಯಕ್ತಿಯೊಂದು ಲಜ್ಜಾ ಬಾಗಿ ನಿಂತಿದೆ! ಆವಳೇ—ಗುರ್ವೇದಿ!

ಕಣ್ತುಂಬ ನೋಡಿದನು. ಕಾಲಿಗೆ ಗೆಜ್ಜೆಗಳನ್ನು ಹಾಕಿಕೊಂಡಿರು ವಳು. ಮೇಘವರ್ಣ ಸೀರೆಯನ್ನುಟ್ಟುಕೊಂಡಿದ್ದಾಳೆ—ಹೊಸದೇ! ಕೈ ತುಂಬ ಹಿತ್ತಾಳೆಯ ಬಳೆಗಳು. ಮ|| ರಾ|| ರಾ ಶಾಮಶೆಟ್ಟಿಯ ಧರ್ಮ ಪತ್ನಿಯಾಗುವೆನೆಂದು ತಿಳಿದು ಸೆರಗನ್ನು ಸುತ್ತಿ ಎದೆಯ ಮೇಲೆ "ಬ್ರೂಚ್" ಇಟ್ಟುಕೊಂಡಿದ್ದಾಳೆ. ತಲೆಕೂದಲನ್ನು ನಯವಾಗಿ ಬಾಚಿ, ಕಸ್ತೂರಿ ಮಲ್ಲಿಗೆಯ ದೊಡ್ಡ ಚೆಂಡನ್ನೆ ಮುಡಿಯಲ್ಲಿಟ್ಟುಕೊಂಡಿದ್ದಾಳೆ. ಹಣೆ ತುಂಬ ಕುಂಕುಮವಿದೆ. ಅಂತೂ ಗರತಿಗೆ ಇರಬೇಕಾದ ಅಲಂಕಾರಗಳೆಲ್ಲ ಇವೆ. ಬಣ್ಣ ಮಾತ್ರ ಕಪ್ಪು; ಕುಲ ಮಾತ್ರ ಹರಿಜನ; ರೂಪ ಮಾತ್ರ— ಹಂ! ಇಲ್ಲಿಲ್ಲ, ಅಲ್ಲಿಲ್ಲ, ನರಕದಲ್ಲಿಲ್ಲ, ಸ್ವರ್ಗದಲ್ಲಿಲ್ಲ, ಆಕಾಶದಲ್ಲಿಲ್ಲ, ಗೌರೀಶಂಕರದಲ್ಲಿರದು;—ಬ್ರಹ್ಮನು ಇಂತಹ ಮತ್ತೊಂದು ಸ್ತ್ರೀರೂಪವನ್ನು ಸೃಷ್ಟಿಸಬೇಕಾದರೆ, ಸೃಷ್ಟಿಸಿದುದನ್ನು ಪುನಃ ತಾನೇ ನೋಡಿ ಎದೆಯೊಡೆಯು ದಂತೆ, ಮೊದಲು "ನರ್ವಿನಸ"ನ್ನು ಕುಡಿದೇ ಕೆಲಸಕ್ಕೆ ಕೈಹಚ್ಚಬೇಕಾ ದೀತು. ಶಾಮನು ಅಲ್ಲಿಂದಲ್ಲೆ ಶವವಾಗದೆ ಉಳಿದುದು ಕೇವಲ ಒಂದು ದೈವಿಕಶಕ್ತಿಯ ಆಧಾರದಿಂದ ಅಥವ ಈ ಮೊದಲೇ ತನ್ನೊಳಗೆ ಮಾಡಿರುವ ಅದೊಂದು ನಿರ್ಧಾರದ ಬಲದಿಂದ.

ಆದರೂ, ಶಾಮನ ದೃಷ್ಟಿಯು ನೆಟ್ಟಲ್ಲೇ! ಎದೆಯಲ್ಲಿ ಉಸಿರಿಲ್ಲ, ನಾಲಗೆಯಲ್ಲಿ ಪಸೆಯಿಲ್ಲ. "ಫಸ್ಟ್ ಐಡಿ"ನ (ಅಪಾಯ ಸಂಭವಗಳಲ್ಲಿ ಕೊಡುವ ತಾತ್ಕಾಲಿಕ ಸಹಾಯ) ಅವಶ್ಯಕತೆಯ ಚಿಹ್ನೆಗಳೇ ತೋರಿದುವು. ಹೇಗೂ ಉಸಿರನ್ನು ಕ್ರಮವಾಗಿರಿಸಿದನು. ದೃಷ್ಟಿಯನ್ನು ಕೆಳಗಿಳಿಸಿ, ಹಣೆಯ ಮೇಲೆದ್ದು ನಿಂತ ಬೆವರುಹನಿಗಳನ್ನುಜ್ಜಿಕೊಂಡನು. ಆ ಮೇಲೆ ಶುಷ್ಕದನಿಯಿಂದ "ನಿನ್ನ ಹೆಸರು?" ಎಂದು ಕೇಳಿದನು.

ಗುರ್ವೇದಿಯು ಲಜ್ಜೆಯಿಂದ ಮತ್ತಷ್ಟು ಬಾಗಿದಳು. ಬಳಿಯಲ್ಲಿದ್ದ ಹೆಂಗುಸೇ ಹೇಳಿದಳು–"ಗುರ್ವೇದಿ ಎಂದು. ಹೇಳವ್ವಾ!" ಎಂದು ನಿಂತವ ರೆಲ್ಲರ ಮುಖದ ಮೇಲೂ ಸಂತೋಷದ ಚಿಹ್ನೆ.

ತಾನು ಏನನ್ನು ಹೇಳಬೇಕೆಂದೆಣಿಸಿ ನಿರ್ಧರಿಸಿ ಬಂದಿದ್ದನೋ ಅದೆಲ್ಲ ಶಾಮನಿಗೆ ಮರೆತುಹೋಯಿತು. ತಬ್ಬಿಬ್ಬಾದನು. ಪುನಃ ತನ್ನ ತಲೆ ಯನ್ನು ಎರಡೂ ಕೈಗಳಿಂದ ಹಿಡಿದುಕೊಂಡನು. ಬಿಂಕಯ್ಯ ರೈ— ಈ ಊರಿನಲ್ಲಿ ಆದರ್ಶನು ತಾನೊಬ್ಬನೇ— ಈ ಗುರ್ವೇದಿ— ಈಗ ತನ್ನೆದು ರಿಗೆ ನಿಂತವರ ಸಂತೋಷದ ಚಿಹ್ನೆ--ಇವೆಲ್ಲವುಗಳನ್ನು ನಿಮಿಷಾರ್ಧದಲ್ಲಿ ನಿಷೇಧಿಸುವುದೇ? ತ್ಯಜಿಸುವುದೇ? ತ್ಯಾಗವಮಾಡುವುದೇ?........

ಮಿದುಳು ಬಿಸಿಯೇರಿತು. ಏರುತ್ತಲೇ ಹೋಯಿತು. ನೂರು ಆಲೋ ಚನೆಗಳು ನಿಮಿಷಾರ್ಧದಲ್ಲಿ ತಲೆಯಲ್ಲಿ ಮಿಂಚಿಹೋದುವು. ನೂರಾರು ಚಿತ್ರಗಳು ಮಾನಸಪಟಲದಲ್ಲಿ ಮೂಡಿ ಅಸ್ತಮಾನವಾದುವು. ರಕ್ತ ಸಂಚಾರದ ಶೀಘ್ರಗತಿಯಿಂದ ನರಗಳೆಲ್ಲ ಉಬ್ಬಿ ಒಡೆಯುವುವೋ ಎಂದು ಭಾಸವಾಯಿತು. ಉದ್ರೇಕವಾಗಿ, ಸಹಿಸಲಾರದೆ,—ತನ್ನ ಬಳಿಯಲ್ಲಿರಿಸಿದ ಸೀರೆಯ ಗಂಟನ್ನು ಗುರ್ವೇದಿಯ ಪದತಲದಲ್ಲಿಟ್ಟು ಉನ್ಮಾದನಂತೆ— "ಅವ್ವಾ, ನನ್ನ ತಾಯಿ!—ಕ್ಷಮಿಸು! ನಿನ್ನ ಕಾಲು ಹಿಡಿವೆನು!— ನಿನ್ನನ್ನು ಮದುವೆಯಾಗುವ ಯೋಗ್ಯತೆಯು ನನ್ನಲ್ಲಿಲ್ಲ!—ಮಹಾ ಅಧಮ—ನೀಚ— ಪ್ರಾಣಿ ನಾನು!" ಎಂದು ಕೂಗಾಡಿದನು.

ಮಿದ್ಯುತ್ಪಾತವಾದಂತೆ ಎಲ್ಲರೂ ಆಶ್ಚರ್ಯಚಕಿತರಾಗಿ ಈ ವಿಕಾರ ಅಭಿನಯವನ್ನು ನೋಡಿ ತಣ್ಣಗಾದರು!

* * * *

ಮರುದಿನ ಶ್ಯಾಮು, ಗುರ್ವೇದಿಯರ ಲಗ್ನದ ದಿನ—ಬಿಂಕಯ್ಯ ರೈಗಳು ಅಧ್ಯಕ್ಷರೊಡನೆ ಹೇಳಿದರು: "ನನ್ನ ಚಿಕ್ಕ ಕವಿತೆಯ ಮೊದಲನೆ ಪ್ರಕಟಣೆಯು ಈ ದಿನವೇ ಆಗತಕ್ಕುದಿತ್ತು. ಆದರೆ, ದೇವರಿಗೆ ಇಚ್ಛೆಯಿಲ್ಲ!" ಎಂದು.

ಅಧ್ಯಕ್ಷರು ಅದೇಕೆನ್ನಲು, ರೈಯವರೆಂದರು:—"ಮೊದಲೇ ರಚಿಸಿಟ್ಟದ್ದೆ, ಶಾಮುನ ಮದುವೆಯ ಹಾಡನ್ನು. ನಮ್ಮೂರಿಗೆ ಆದರ್ಶನು ಶಾಮುನೊಬ್ಬನೇ ಎಂದು ಅದರ ಸಾರಾಂಶ. ದೈವೇಚ್ಛೆ........"

"ಏನಯ್ಯಾ, ಇನ್ನೂ ದೈವೇಚ್ಛೆಯೆನ್ನುತ್ತೀರಿ? ನಿಮಗೇನಾದರೂ ದೈವತಾಗಿದೆಯೋ?" ಎಂದರು ಅಧ್ಯಕ್ಷರು.

ಬಿಂಕಯ್ಯ ರೈಗಳು ಬಾಯಿಯನ್ನಗಲಿಸಿ ಅಧ್ಯಕ್ಷರನ್ನೇ ನೋಡಿ, ಮುಂಜಾನೆ ಇವರು ಸುರಾಪಾನಮಾಡಿರುವರೆಂಬ ಸಂದೇಹವನ್ನು ಅವರ ಮುಖನೋಡಿ ಪರಿಹರಿಸಿ, "ಏನು, ನಿಮಗೆ ನಿಜವಾಗಿಯೂ ತಿಳಿದಿಲ್ಲವೇ? ಶಾಮುನು ಕತ್ತಿಗೆ ನೇಣುಹಾಕಿ ಆತ್ಮಹತ್ಯಮಾಡಿಕೊಂಡಿರುವನು!"ಎಂದರು.

ಅಧ್ಯಕ್ಷರು ಆಶ್ಚರ್ಯದಿಂದ—"ಏನು, ಆತ್ಮಹತ್ಯ? ಶಾಮು? ಈ ದಿನ ಬೆಳಿಗ್ಗೆ?" ಎಂದು ಕೇಳಿದರು.

"ಅಹುದು, ಈ ದಿನ ಮುಂಜಾನೆ. ಇದೋ ನೋಡಿರಿ!" ಎನ್ನುತ್ತ ರೈಯವರು ಒಂದು ಪತ್ರವನ್ನು ತೆಗೆದು, ಅಧ್ಯಕ್ಷರ ಕೈಯಲ್ಲಿಟ್ಟರು.

ಶಾಮುನೇ ಬರೆದುದು. ಮೂರೇ ಪಂಕ್ತಿಗಳು:–"**ಹರಿಜನರ ಉದ್ಧಾರವಾಗಬೇಕು. ಆದರೆ, ನನ್ನಂತಹ ಪಾಮರರಿಂದಲ್ಲ. ನಾನು ಬಡವನು.**"

ಪತ್ರವನ್ನು ಮಡಚಿ, ಅಧ್ಯಕ್ಷರು, "ಅಯ್ಯೋ, ಮದುವೆಯಾಗುವ ಮೊದಲೇ!" ಎಂದು ಮರುಗಿದರು.

"ಅಹುದು, ತುಸು ಮೊದಲು! ಮದುವೆಯಾಗಿ, ನಾಳೆ ಸಾಯಬಹುದಿತ್ತು. ಅಥವಾ ನಮ್ಮೂರಲ್ಲಿ ಅಂತಹದೊಂದು ಮದುವೆಯಾಯಿತೆಂದು ನಾಮಮಾತ್ರಕ್ಕೆ ದಾಖಲೆಯಿರಲಿಕ್ಕಾಗಿ–ನಮ್ಮ ಸಂಘದ ಮರ್ಯಾದೆಯುಳಿಸಲು—ಮದುವೆಯಾದ ಅರ್ಧ ತಾಸಿನಲ್ಲಿ ಸತ್ತರೂ ನಾವು ಆ ಅಪರಾಧವನ್ನು ಕ್ಷಮಿಸುತಿದ್ದೆವು. ಹರಿಜನ ಕಮಿಟಿಯ ಪ್ರಮುಖ ಸದಸ್ಯರಾದ

ನಮಗೆ ಇಂತಹ ಚಿಕ್ಕದೊಂದು ಅಪರಾಧವನ್ನು ಕ್ಷಮಿಸುವ ಹಕ್ಕು ಇಲ್ಲ ದುಂಟೇ?—ಅದೆಲ್ಲ ಬಿಟ್ಟು, ಈ ಚಾಂಡಾಲ, ಹೀಗೂ ಸಾಯುವುದುಂಟೇ? ಮತ್ತು........ವಿಶ್ರಮರಾಯರೇ! ಆ ವಂತಿಗೆಯ ೨೫ ರೂಪಾಯಿಗಳನ್ನೂ ತಾನು ಸಾಯುವಾಗ ತಿಂದೇ ಸತ್ತನಲ್ಲ ಆ ಮುಂಡೇಮಗ!—ಮತ್ತು, ಆ ದಿನ ರಿಮ್ಝಾನ್ ಕಾಫಿ!! ಥೂ! ಆತನು ಹಾಗೆ ಠಕಾಯಿಸಿ ಆತ್ಮಹತ್ಯ ಮಾಡಿ ಕೊಳ್ಳುವ ಬದಲಿಗೆ—ಬದಲಿಗೆ—ಬದಲಿಗೆ—ಬದಲಿಗೆ..........."

"ಸಾಯುವುದೊಳ್ಳೆದಿತ್ತು!" ಎಂದು ಸಹಾಯಮಾಡಿದರು ಅಧ್ಯಕ್ಷರು.

"ಅಹುದು, ಸಾಯಬಹುದಿತ್ತು."ಎಂದೊಪ್ಪಿದರು ಓಮಾರ ಖಯ್ಯಾಮ ಯಾನೆ ಬಿಂಕಯ್ಯ ರೈ.

ಹರಿಜನ ಸೇವಾಸಂಘದ ಅಧ್ಯಕ್ಷರು ಒಂದು ನಿಟ್ಟುಸಿರು ಬಿಟ್ಟು, "ಏನೋ,—ಜೀವನವೆಂದರೆ ಒಂದು ಚಿಟಿಕಿನಷ್ಟು. ಸಾಯಲೇಬೇಕಾದ ವನು ಮಹತ್ಕಾರ್ಯವೇನಾದರೂ ಮಾಡಿ ಸಾಯುವುದೊಳ್ಳೆಯದು. ಒಂದಿಷ್ಟೇ—ಜೀವನವೆಂದರೆ—ಚಿಟಿಕಿನಷ್ಟೇ!" ಎನ್ನುತ್ತ, ಶರ್ಟಿನೊಳಗೆ ಕೈಹಾಕಿ, ತಮ್ಮಲ್ಲಿರುವ ತಗಣೆಯ ಅಕ್ಷಯ ಭಂಡಾರದಿಂದ ಒಂದು ತಗಣೆ ಯನ್ನು ಬೇಟೆಮಾಡಿ ಹಿಡಿದು, ಹಿಚಿಕಿ ಕೊಂದು, ಆ ನೆತ್ತರನ್ನೂ ಜಜ್ಜಾದ ತಗಣೆಯ ಮೃತಶರೀರವನ್ನೂ ಪುನಃ ತನ್ನ ಶರ್ಟಿಗೇ ಒರಸಿ, ಕಾಫಿ ಕುಡಿಯ ಲೆಂದು ರೈಯವರನ್ನು ತಮ್ಮ ಹಜಾರದೊಳಗೆ ಕರೆದೊಯ್ದರು.



